CPMG / KA / BG-GPO/13/2003-2005

ವಿಶ್ವಮಾನವ ವರ್ಷ



# ಕರ್ನಾಟಕ ರಾಜ್ಯಪತ್ರ

ಅಧಿಕೃತವಾಗಿ ಪ್ರಕಟಿಸಲಾದುದು

| ಸಂಪುಟ ೧೩೯ | ಬೆಂಗಳೂರು, ಗುರುವಾರ, ಏಪ್ರಿಲ್ ೮, ೨೦೦೪ (ಚೈತ್ರ ೧೯, ಶಕ ವರ್ಷ ೧೯೨೬) | ಸಂಚಿಕೆ ೧೫ |
|---|---|---|

## ಭಾಗ - ೩

## ಸರ್ಕಾರದ ಆಯಾ ಇಲಾಖೆಗಳ ಮುಖ್ಯಸ್ಥರ ಮತ್ತು ಸ್ಥಳೀಯ ಪ್ರಾಧಿಕಾರಿಗಳಿಗೆ ಸಂಬಂಧಿಸಿದ ಅಧಿಸೂಚನೆಗಳು

### ನಿರ್ದೇಶಕರು, ಗಣಿ ಮತ್ತು ಭೂವಿಜ್ಞಾನ ಇಲಾಖೆ, ಬೆಂಗಳೂರು ರವರ ನಡವಳಿಗಳು

**ವಿಷಯ :** ಬೆಂಗಳೂರು ಗ್ರಾಮಾಂತರ ಜಿಲ್ಲೆ, ಕನಕಪುರ ತಾಲ್ಲೂಕು, ಚಿಕ್ಕೊಪ್ಪ ಗ್ರಾಮದಲ್ಲಿ ಮಲ್ಟಿಕಲರ್ ಶಿಲೆಗಾಗಿ ಶ್ರೀ ಟಿ.ಎಸ್. ಪ್ರಭಾಕರ್ ರವರಿಗೆ ಮಂಜೂರಾಗಿದ್ದ ಕಲ್ಲು ಗಣಿ ಗುತ್ತಿಗೆ ಸಂಖ್ಯೆ 119ರ ಗುತ್ತಿಗೆಯನ್ನು ರದ್ದುಗೊಳಿಸುವ ಬಗ್ಗೆ.

**ಉಲ್ಲೇಖ :**
1. ಕೇಂದ್ರ ಕಛೇರಿ ಪತ್ರ ಸಂಖ್ಯೆ: ಗಭೂಇ: ಡಿಸಿಬಿ:ಕಗಗು:119:2001-02:720 ದಿನಾಂಕ: 22.5.2002.
2. ಉಪ ನಿರ್ದೇಶಕರು, ಕನಕಪುರ ರವರ ಪತ್ರ ಸಂಖ್ಯೆ: ಗಭೂಇ: ಉನಿಕ: ಡಿ.ಸಿ.ಬಿ:ಕಗಗು 119: 2003-04: 5738 ದಿನಾಂಕ: 23.8.2003.

**ಪ್ರಸ್ತಾವನೆ:**

ಬೆಂಗಳೂರು ಗ್ರಾಮಾಂತರ ಜಿಲ್ಲೆ, ಕನಕಪುರ ತಾಲ್ಲೂಕು, ಚಿಕ್ಕೊಪ್ಪ ಗ್ರಾಮದ ಸರ್ವೆ ನಂ. 35 ರಲ್ಲಿ ಶ್ರೀ ಟಿ. ಎಸ್. ಪ್ರಭಾಕರ್ ರವರಿಗೆ 2-00 ಎಕರೆಗೆ ದಿನಾಂಕ: 16.8.1997 ರಿಂದ 10 ವರ್ಷಗಳಿಗಾಗಿ ಕಲ್ಲು ಗಣಿ ಗುತ್ತಿಗೆ ಮಂಜೂರು ಮಾಡಲಾಗಿತ್ತು. ಉಲ್ಲೇಖಿತ ಪತ್ರ (2)ರಲ್ಲಿ ಗುತ್ತಿಗೆದಾರರಿಗೆ ನಿಯಮಾನುಸಾರ ಸೂಚನಾ ಪತ್ರ ನೀಡಿ 2003ರ ಮಾರ್ಚ್ ಅಂತ್ಯದವರೆಗೆ ಬಾಕಿ ರೂ.1,45,007/- ಗಳನ್ನು ಪಾವತಿಸುವಂತೆ ತಿಳಿಸಲಾಗಿತ್ತು.

ಗಣಿ ಮತ್ತು ಭೂ ವಿಜ್ಞಾನ ಇಲಾಖೆಯ ನಿರ್ದೇಶಕರ ಗಮನಕ್ಕೆ ಬಂದಂತೆ ಗುತ್ತಿಗೆದಾರರು ಮೇಲಿನ ಉಲ್ಲೇಖಿತ ಪತ್ರ 1ರ ಅಂತಿಮ ನೋಟೀಸಿಗೆ ಯಾವ ರೀತಿಯೂ ಸ್ಪಂದಿಸಿರುವುದಿಲ್ಲವಾದ ಕಾರಣ ಹಾಗೂ ಉಲ್ಲೇಖಿತ ಪತ್ರದ 2ರಲ್ಲಿ ತಿಳಿಸಿದಂತೆ ಗುತ್ತಿಗೆಯನ್ನು ನಿಷ್ಕ್ರಿಯವಾಗಿಟ್ಟಿರುವುದರಿಂದ ಕರ್ನಾಟಕ ಉಪ ಖನಿಜ ರಿಯಾಯಿತಿ ನಿಯಮ 1994ರ ನಿಯಮ 6(1) ಮತ್ತು 39 ರಂತೆ ಸರ್ಕಾರದ ಅಧಿಸೂಚನೆ III ಸಂಖ್ಯೆ:ಸಿಐ 418 ಎಂಆರ್‌ಸಿ 92 ದಿನಾಂಕ: 2.7.94 ರಲ್ಲಿ ಪ್ರತ್ಯೋಜಿಸಿರುವ ಅಧಿಕಾರದಂತೆ ಗುತ್ತಿಗೆಯನ್ನು ರದ್ದುಪಡಿಸಬೇಕಾಗಿದೆ.

**ಆದೇಶ**

**ಆದೇಶ ಸಂಖ್ಯೆ:ಗಭೂಇ:ಡಿಸಿಬಿ:ಕಗಗು:119:2003-04:19623:ದಿನಾಂಕ: 16ನೇ ಮಾರ್ಚ್ 2004**

ಕರ್ನಾಟಕ ಉಪ ಖನಿಜ ರಿಯಾಯಿತಿ ನಿಯಮ 1994ರ ನಿಯಮ 6(1) ಮತ್ತು 39 ರಂತೆ ಗಣಿ ಮತ್ತು ಭೂ ವಿಜ್ಞಾನ ಇಲಾಖೆಯ ನಿರ್ದೇಶಕರಿಗೆ ಪ್ರತ್ಯೋಜಿಸಿರುವ ಅಧಿಕಾರದಡಿಯಲ್ಲಿ ಬೆಂಗಳೂರು ಗ್ರಾಮಾಂತರ ಜಿಲ್ಲೆ, ಕನಕಪುರ ತಾಲ್ಲೂಕಿನ, ಚಿಕ್ಕೊಪ್ಪ ಗ್ರಾಮದ ಸರ್ವೆ ನಂ. 35 ರಲ್ಲಿ 2-00 ಎಕರೆಗೆ ಮಲ್ಟಿಕಲರ್ ಶಿಲೆಗಾಗಿ ನೀಡಿದ್ದ ಕಲ್ಲು ಗಣಿ ಗುತ್ತಿಗೆ ಸಂಖ್ಯೆ: 119ನ್ನು ತಕ್ಷಣದಿಂದ ಜಾರಿಗೆ ಬರುವಂತೆ ಲ್ಯಾಪ್ಸ್ಡ್ ಲೀಸ್ ಎಂದು ಪರಿಗಣಿಸಿ ಗುತ್ತಿಗೆಯನ್ನು ರದ್ದುಪಡಿಸಲಾಗಿದೆ. ಹಾಗೂ ಈ ಗುತ್ತಿಗೆಗೆ ಸಲ್ಲಿಸಿದ್ದ ಜಾಮೀನು ಠೇವಣಿಯನ್ನು ಇಲಾಖೆಗೆ ಮುಟ್ಟುಗೋಲು ಮಾಡಿಕೊಳ್ಳಲಾಗಿದೆ.

ಪಿ.ಆರ್. 433 ನಿರ್ದೇಶಕರು, ಗಣಿ ಮತ್ತು ಭೂವಿಜ್ಞಾನ ಇಲಾಖೆ, ಬೆಂಗಳೂರು.

**ನಿರ್ದೇಶಕರು, ಗಣಿ ಮತ್ತು ಭೂವಿಜ್ಞಾನ ಇಲಾಖೆ, ಬೆಂಗಳೂರು ರವರ ನಡವಳಿಗಳು**

**ವಿಷಯ :** ಬೆಂಗಳೂರು ಗ್ರಾಮಾಂತರ ಜಿಲ್ಲೆ, ಕನಕಪುರ ತಾಲ್ಲೂಕು, ಚಿಕ್ಕೊಪ್ಪ ಗ್ರಾಮದಲ್ಲಿ ಮಲ್ಟಿಕಲರ್ ಶಿಲೆಗಾಗಿ ಶ್ರೀ ಹೆಚ್. ಪಿ. ರವಿಕುಮಾರ್ ರವರಿಗೆ ಮಂಜೂರಾಗಿದ್ದ ಕಲ್ಲು ಗಣಿ ಗುತ್ತಿಗೆ ಸಂಖ್ಯೆ 321ರ ಗುತ್ತಿಗೆಯನ್ನು ರದ್ದುಗೊಳಿಸುವ ಬಗ್ಗೆ.

**ಉಲ್ಲೇಖ :**
1. ಕೇಂದ್ರ ಕಛೇರಿ ಪತ್ರ ಸಂಖ್ಯೆ: ಗಭೂಇ: ಡಿಸಿಬಿ:ಕಗಗು:321:2002-03: 21 ದಿನಾಂಕ: 3.4.2003.
2. ಉಪ ನಿರ್ದೇಶಕರು, ಕನಕಪುರ ರವರ ಪತ್ರ ಸಂಖ್ಯೆ: ಗಭೂಇ: ಉನಿಕ: ಡಿ.ಸಿ.ಬಿ:ಕಗಗು 321: 2003-04: 5898 ದಿನಾಂಕ: 27.8.2003.

**ಪ್ರಸ್ತಾವನೆ:**

ಬೆಂಗಳೂರು ಗ್ರಾಮಾಂತರ ಜಿಲ್ಲೆ, ಕನಕಪುರ ತಾಲ್ಲೂಕು, ಚಿಕ್ಕೊಪ್ಪ ಗ್ರಾಮದ ಸರ್ವೆ ನಂ. 35 ರಲ್ಲಿ ಶ್ರೀ ಹೆಚ್.ಪಿ. ರವಿಕುಮಾರ್ ರವರಿಗೆ 2-00 ಎಕರೆಗೆ ದಿನಾಂಕ: 12.5.2000 ರಿಂದ 10 ವರ್ಷಗಳಿಗಾಗಿ ಕಲ್ಲು ಗಣಿ ಗುತ್ತಿಗೆ ಮಂಜೂರು ಮಾಡಲಾಗಿತ್ತು. ಉಲ್ಲೇಖಿತ ಪತ್ರ (2)ರಲ್ಲಿ ಗುತ್ತಿಗೆದಾರರಿಗೆ ನಿಯಮಾನುಸಾರ ಸೂಚನಾ ಪತ್ರ ನೀಡಿ 2003ರ ಮಾರ್ಚ್ ಅಂತ್ಯದವರೆಗೆ ಬಾಕಿ ರೂ. 76,267/- ಗಳನ್ನು ಪಾವತಿಸುವಂತೆ ತಿಳಿಸಲಾಗಿತ್ತು.

ಗಣಿ ಮತ್ತು ಭೂ ವಿಜ್ಞಾನ ಇಲಾಖೆಯ ನಿರ್ದೇಶಕರ ಗಮನಕ್ಕೆ ಬಂದಂತೆ ಗುತ್ತಿಗೆದಾರರು ಮೇಲಿನ ಉಲ್ಲೇಖಿತ ಪತ್ರ 1ರ ಅಂತಿಮ ನೋಟೀಸಿಗೆ ಯಾವ ರೀತಿಯೂ ಸ್ಪಂದಿಸಿರುವುದಿಲ್ಲವಾದ ಕಾರಣ ಹಾಗೂ ಉಲ್ಲೇಖಿತ ಪತ್ರದ 2ರಲ್ಲಿ ತಿಳಿಸಿದಂತೆ ಗುತ್ತಿಗೆಯನ್ನು ನಿಷ್ಕ್ರಿಯವಾಗಿಟ್ಟಿರುವುದರಿಂದ ಕರ್ನಾಟಕ ಉಪ ಖನಿಜ ರಿಯಾಯಿತಿ ನಿಯಮ 1994ರ ನಿಯಮ 6(1) ಮತ್ತು 39 ರಂತೆ ಸರ್ಕಾರದ ಅಧಿಸೂಚನೆ III ಸಂಖ್ಯೆ: ಸಿಐ 418 ಎಂಆರ್‌ಸಿ 92 ದಿನಾಂಕ: 2.7.94ರಲ್ಲಿ ಪ್ರತ್ಯೋಜಿಸಿರುವ ಅಧಿಕಾರದಂತೆ ಗುತ್ತಿಗೆಯನ್ನು ರದ್ದುಪಡಿಸಬೇಕಾಗಿದೆ.

**ಆದೇಶ**

**ಆದೇಶ ಸಂಖ್ಯೆ:ಗಭೂಇ:ಡಿಸಿಬಿ:ಕಗಗು:321:2003-04:19499:ದಿನಾಂಕ: 15ನೇ ಮಾರ್ಚ್ 2004**

ಕರ್ನಾಟಕ ಉಪ ಖನಿಜ ರಿಯಾಯಿತಿ ನಿಯಮ 1994ರ ನಿಯಮ 6(1) ಮತ್ತು 39 ರಂತೆ ಗಣಿ ಮತ್ತು ಭೂ ವಿಜ್ಞಾನ ಇಲಾಖೆಯ ನಿರ್ದೇಶಕರಿಗೆ ಪ್ರತ್ಯೋಜಿಸಿರುವ ಅಧಿಕಾರದಡಿಯಲ್ಲಿ ಬೆಂಗಳೂರು ಗ್ರಾಮಾಂತರ ಜಿಲ್ಲೆ, ಕನಕಪುರ ತಾಲ್ಲೂಕಿನ, ಚಿಕ್ಕೊಪ್ಪ ಗ್ರಾಮದ ಸರ್ವೆ ನಂ. 35 ರಲ್ಲಿ 2-00 ಎಕರೆಗೆ ಮಲ್ಟಿಕಲರ್ ಶಿಲೆಗಾಗಿ ನೀಡಿದ್ದ ಕಲ್ಲು ಗಣಿ ಗುತ್ತಿಗೆ ಸಂಖ್ಯೆ: 321ನ್ನು ತಕ್ಷಣದಿಂದ ಜಾರಿಗೆ ಬರುವಂತೆ ಲ್ಯಾಪ್ಸ್‌ಡ್ ಲೀಸ್ ಎಂದು ಪರಿಗಣಿಸಿ ಗುತ್ತಿಗೆಯನ್ನು ರದ್ದುಪಡಿಸಲಾಗಿದೆ. ಹಾಗೂ ಈ ಗುತ್ತಿಗೆಗೆ ಸಲ್ಲಿಸಿದ್ದ ಜಾಮೀನು ಠೇವಣಿಯನ್ನು ಇಲಾಖೆಗೆ ಮುಟ್ಟುಗೋಲು ಮಾಡಿಕೊಳ್ಳಲಾಗಿದೆ.

ಪಿ.ಆರ್. 434 ನಿರ್ದೇಶಕರು, ಗಣಿ ಮತ್ತು ಭೂವಿಜ್ಞಾನ ಇಲಾಖೆ, ಬೆಂಗಳೂರು.

**ನಿರ್ದೇಶಕರು, ಗಣಿ ಮತ್ತು ಭೂವಿಜ್ಞಾನ ಇಲಾಖೆ, ಬೆಂಗಳೂರು ರವರ ನಡವಳಿಗಳು**

**ವಿಷಯ :** ಬೆಂಗಳೂರು ಗ್ರಾಮಾಂತರ ಜಿಲ್ಲೆ, ಕನಕಪುರ ತಾಲ್ಲೂಕು, ಕೆಬ್ಬೆಹಳ್ಳಿ ಗ್ರಾಮದಲ್ಲಿ ಮಲ್ಟಿಕಲರ್ ಶಿಲೆಗಾಗಿ ಶ್ರೀಮತಿ ವೈಜಯಂತಿ ಶಿವಾಜಿರಾವ್ ರವರಿಗೆ ಕಲ್ಲು ಗಣಿ ಗುತ್ತಿಗೆ ಸಂಖ್ಯೆ 205ರ ಗುತ್ತಿಗೆಯನ್ನು ರದ್ದುಗೊಳಿಸುವ ಬಗ್ಗೆ.

**ಉಲ್ಲೇಖ :**
1. ಕೇಂದ್ರ ಕಛೇರಿ ಪತ್ರ ಸಂಖ್ಯೆ: ಗಭೂಇ: ಡಿಸಿಬಿ:ಕಗಗು:205:2002-03:137 ದಿನಾಂಕ: 8.4.2003.
2. ಉಪ ನಿರ್ದೇಶಕರು, ಕನಕಪುರ ರವರ ಪತ್ರ ಸಂಖ್ಯೆ: ಗಭೂಇ: ಉನಿಕ:ಕಗಗು:205: 2003-04:6407 ದಿನಾಂಕ: 11.9.2003.

**ಪ್ರಸ್ತಾವನೆ:**

ಬೆಂಗಳೂರು ಗ್ರಾಮಾಂತರ ಜಿಲ್ಲೆ, ಕನಕಪುರ ತಾಲ್ಲೂಕು, ಕೆಬ್ಬೆಹಳ್ಳಿ ಗ್ರಾಮದ ಸರ್ವೆ ನಂ. 112 ರಲ್ಲಿ ಶ್ರೀಮತಿ ವೈಜಯಂತಿ ಶಿವಾಜಿರಾವ್ ರವರಿಗೆ 1.26 ಎಕರೆಗೆ ದಿನಾಂಕ: 21.8.1998 ರಿಂದ 10 ವರ್ಷಗಳಿಗಾಗಿ ಕಲ್ಲು ಗಣಿ ಗುತ್ತಿಗೆ ಮಂಜೂರು ಮಾಡಲಾಗಿತ್ತು. ಉಲ್ಲೇಖಿತ ಪತ್ರ (2)ರಲ್ಲಿ ಗುತ್ತಿಗೆದಾರರಿಗೆ ನಿಯಮಾನುಸಾರ ಸೂಚನಾ ಪತ್ರ ನೀಡಿ 2003ರ ಮಾರ್ಚ್ ಅಂತ್ಯದವರೆಗೆ ಬಾಕಿ ರೂ. 65,719/-ಗಳನ್ನು ಪಾವತಿಸುವಂತೆ ತಿಳಿಸಲಾಗಿತ್ತು.

ಗಣಿ ಮತ್ತು ಭೂ ವಿಜ್ಞಾನ ಇಲಾಖೆಯ ನಿರ್ದೇಶಕರ ಗಮನಕ್ಕೆ ಬಂದಂತೆ ಗುತ್ತಿಗೆದಾರರು ಮೇಲಿನ ಉಲ್ಲೇಖಿತ ಪತ್ರ 1ರ ಅಂತಿಮ ನೋಟೀಸಿಗೆ ಯಾವ ರೀತಿಯೂ ಸ್ಪಂದಿಸಿರುವುದಿಲ್ಲವಾದ ಕಾರಣ ಹಾಗೂ ಉಲ್ಲೇಖಿತ ಪತ್ರದ 2ರಲ್ಲಿ ತಿಳಿಸಿದಂತೆ ಗುತ್ತಿಗೆಯನ್ನು ನಿಷ್ಕ್ರಿಯವಾಗಿಟ್ಟಿರುವುದರಿಂದ ಕರ್ನಾಟಕ ಉಪ ಖನಿಜ ರಿಯಾಯಿತಿ ನಿಯಮ 1994ರ ನಿಯಮ 6(1) ಮತ್ತು 39 ರಂತೆ ಸರ್ಕಾರದ ಅಧಿಸೂಚನೆ III ಸಂಖ್ಯೆ: ಸಿಐ 418 ಎಂಆರ್‌ಸಿ 92 ದಿನಾಂಕ: 2.7.94 ರಲ್ಲಿ ಪ್ರತ್ಯೋಜಿಸಿರುವ ಅಧಿಕಾರದಂತೆ ಗುತ್ತಿಗೆಯನ್ನು ರದ್ದುಪಡಿಸಬೇಕಾಗಿದೆ.

**ಆದೇಶ**

**ಆದೇಶ ಸಂಖ್ಯೆ:ಗಭೂಇ:ಡಿಸಿಬಿ:ಕಗಗು:205:2003-04:19716:ದಿನಾಂಕ: 18ನೇ ಮಾರ್ಚ್ 2004**

ಕರ್ನಾಟಕ ಉಪ ಖನಿಜ ರಿಯಾಯಿತಿ ನಿಯಮ 1994ರ ನಿಯಮ 6(1) ಮತ್ತು 39 ರಂತೆ ಗಣಿ ಮತ್ತು ಭೂ ವಿಜ್ಞಾನ ಇಲಾಖೆಯ ನಿರ್ದೇಶಕರಿಗೆ ಪ್ರತ್ಯೋಜಿಸಿರುವ ಅಧಿಕಾರದಡಿಯಲ್ಲಿ ಬೆಂಗಳೂರು ಗ್ರಾಮಾಂತರ ಜಿಲ್ಲೆ, ಕನಕಪುರ ತಾಲ್ಲೂಕಿನ, ಕೆಬೆಹಳ್ಳಿ

ಗ್ರಾಮದ ಸರ್ವೆ ನಂ. 112 ರಲ್ಲಿ 1-26 ಎಕರೆಗೆ ಮಲ್ಟಿಕಲರ್ ಶಿಲೆಗಾಗಿ ನೀಡಿದ್ದ ಕಲ್ಲು ಗಣಿ ಗುತ್ತಿಗೆ ಸಂಖ್ಯೆ: 205ನ್ನು ಗುತ್ತಿಗೆಯ ಮೇಲಿನ ಬಾಕಿಯನ್ನು ಪಾವತಿಸದೆ ಗುತ್ತಿಗೆಯನ್ನು ನಿಷ್ಕ್ರಿಯಗೊಳಿಸಿರುವ ಕಾರಣ ತಕ್ಷಣದಿಂದ ಜಾರಿಗೆ ಬರುವಂತೆ ಗುತ್ತಿಗೆಯನ್ನು ರದ್ದುಪಡಿಸಲಾಗಿದೆ ಹಾಗೂ ಗುತ್ತಿಗೆಗೆ ಸಲ್ಲಿಸಿದ್ದ ಜಾಮೀನು ಠೇವಣಿಯನ್ನು ಇಲಾಖೆಗೆ ಮುಟ್ಟುಗೋಲು ಮಾಡಿಕೊಳ್ಳಲಾಗಿದೆ.

ಪಿ.ಆರ್. 435 ನಿರ್ದೇಶಕರು, ಗಣಿ ಮತ್ತು ಭೂವಿಜ್ಞಾನ ಇಲಾಖೆ, ಬೆಂಗಳೂರು.

**ನಿರ್ದೇಶಕರು, ಗಣಿ ಮತ್ತು ಭೂವಿಜ್ಞಾನ ಇಲಾಖೆ, ಬೆಂಗಳೂರು ರವರ ನಡವಳಿಗಳು**

**ವಿಷಯ :** ಬೆಂಗಳೂರು ಗ್ರಾಮಾಂತರ ಜಿಲ್ಲೆ, ಕನಕಪುರ ತಾಲ್ಲೂಕು, ಶಿವನಹಳ್ಳಿ ಗ್ರಾಮದಲ್ಲಿ ಮಲ್ಟಿಕಲರ್ ಶಿಲೆಗಾಗಿ ಮೆ: ಹಿಲ್‌ಟಾಪ್ ಗ್ರಾನೈಟ್ ಪ್ರೈಲಿ., ರವರಿಗೆ ಕಲ್ಲು ಗಣಿ ಗುತ್ತಿಗೆ ಸಂಖ್ಯೆ: 451 ರ ಗುತ್ತಿಗೆಯನ್ನು ರದ್ದುಗೊಳಿಸುವ ಬಗ್ಗೆ.

**ಉಲ್ಲೇಖ :**
1. ಕೇಂದ್ರ ಕಛೇರಿ ಪತ್ರ ಸಂಖ್ಯೆ: ಗಭೂಇ: ಡಿಸಿಬಿ:ಕಗಗು:451:2003-04:3745 ದಿನಾಂಕ: 29.9.2003.
2. ಉಪ ನಿರ್ದೇಶಕರು, ಕನಕಪುರ ರವರ ಪತ್ರ ಸಂಖ್ಯೆ: ಗಭೂಇ: ಉನಿಕ:ಕಗಗು:451:2003-04:4424 ದಿನಾಂಕ: 22.7.2003.

**ಪ್ರಸ್ತಾವನೆ:**

ಬೆಂಗಳೂರು ಗ್ರಾಮಾಂತರ ಜಿಲ್ಲೆ, ಕನಕಪುರ ತಾಲ್ಲೂಕು, ಶಿವನಹಳ್ಳಿ ಗ್ರಾಮದ ಸರ್ವೆ ನಂ. 154 ರಲ್ಲಿ ಮೆ: ಹಿಲ್‌ಟಾಪ್ ಗ್ರಾನೈಟ್ ಪ್ರೈ.ಲಿ., ರವರಿಗೆ 4.00 ಎಕರೆಗೆ ದಿನಾಂಕ: 4.6.2004 ರಿಂದ 10 ವರ್ಷಗಳಿಗಾಗಿ ಕಲ್ಲು ಗಣಿ ಗುತ್ತಿಗೆ ಮಂಜೂರು ಮಾಡಲಾಗಿತ್ತು. ಉಲ್ಲೇಖಿತ ಪತ್ರ (2)ರಲ್ಲಿ ಗುತ್ತಿಗೆದಾರರಿಗೆ ನಿಯಮಾನುಸಾರ ಸೂಚನಾ ಪತ್ರ ನೀಡಿ 2003ರ ಮಾರ್ಚ್ ಅಂತ್ಯದವರೆಗೆ ಬಾಕಿ ರೂ. 64,971/-ಗಳನ್ನು ಪಾವತಿಸುವಂತೆ ತಿಳಿಸಲಾಗಿತ್ತು.

ಗಣಿ ಮತ್ತು ಭೂ ವಿಜ್ಞಾನ ಇಲಾಖೆಯ ನಿರ್ದೇಶಕರ ಗಮನಕ್ಕೆ ಬಂದಂತೆ ಗುತ್ತಿಗೆದಾರರು ಮೇಲಿನ ಉಲ್ಲೇಖಿತ ಪತ್ರ 1ರ ಅಂತಿಮ ನೋಟೀಸಿಗೆ ಯಾವ ರೀತಿಯೂ ಸ್ಪಂದಿಸಿರುವುದಿಲ್ಲವಾದ ಕಾರಣ ಹಾಗೂ ಉಲ್ಲೇಖಿತ ಪತ್ರದ 2ರಲ್ಲಿ ತಿಳಿಸಿದಂತೆ ಗುತ್ತಿಗೆಯನ್ನು ನಿಷ್ಕ್ರಿಯವಾಗಿಟ್ಟಿರುವುದರಿಂದ ಕರ್ನಾಟಕ ಉಪ ಖನಿಜ ರಿಯಾಯಿತಿ ನಿಯಮ 1994ರ ನಿಯಮ 6(1) ಮತ್ತು 39 ರಂತೆ ಸರ್ಕಾರದ ಅಧಿಸೂಚನೆ III ಸಂಖ್ಯೆ: ಸಿಐ 418 ಎಂಆರ್‌ಸಿ 92 ದಿನಾಂಕ: 2.7.94 ರಲ್ಲಿ ಪ್ರತ್ಯೋಜಿಸಿರುವ ಅಧಿಕಾರದಂತೆ ಗುತ್ತಿಗೆಯನ್ನು ರದ್ದುಪಡಿಸಬೇಕಾಗಿದೆ.

**ಆದೇಶ**

**ಆದೇಶ ಸಂಖ್ಯೆ:ಗಭೂಇ:ಡಿಸಿಬಿ:ಕಗಗು:451:2003-04:19725:ದಿನಾಂಕ: 18ನೇ ಮಾರ್ಚ್ 2004**

ಕರ್ನಾಟಕ ಉಪ ಖನಿಜ ರಿಯಾಯಿತಿ ನಿಯಮ 1994ರ ನಿಯಮ 6(1) ಮತ್ತು 39 ರಂತೆ ಗಣಿ ಮತ್ತು ಭೂ ವಿಜ್ಞಾನ ಇಲಾಖೆಯ ನಿರ್ದೇಶಕರಿಗೆ ಪ್ರತ್ಯೋಜಿಸಿರುವ ಅಧಿಕಾರದಡಿಯಲ್ಲಿ ಬೆಂಗಳೂರು ಗ್ರಾಮಾಂತರ ಜಿಲ್ಲೆ, ಕನಕಪುರ ತಾಲ್ಲೂಕಿನ, ಶಿವನಹಳ್ಳಿ ಗ್ರಾಮದ ಸರ್ವೆ ನಂ. 154 ರಲ್ಲಿ 4.00 ಎಕರೆಗೆ ಮಲ್ಟಿಕಲರ್ ಶಿಲೆಗಾಗಿ ನೀಡಿದ್ದ ಕಲ್ಲು ಗಣಿ ಗುತ್ತಿಗೆ ಸಂಖ್ಯೆ: 451ನ್ನು ತಕ್ಷಣದಿಂದ ಲ್ಯಾಪ್ಸ್ಡ್ ಲೀಸ್ ಎಂದು ಪರಿಗಣಿಸಿ ಗುತ್ತಿಗೆಯನ್ನು ರದ್ದುಪಡಿಸಲಾಗಿದೆ. ಹಾಗೂ ಈ ಗುತ್ತಿಗೆಗೆ ಸಲ್ಲಿಸಿದ್ದ ಜಾಮೀನು ಠೇವಣಿಯನ್ನು ಇಲಾಖೆಗೆ ಮುಟ್ಟುಗೋಲು ಮಾಡಿಕೊಳ್ಳಲಾಗಿದೆ.

ಪಿ.ಆರ್. 436 ನಿರ್ದೇಶಕರು, ಗಣಿ ಮತ್ತು ಭೂವಿಜ್ಞಾನ ಇಲಾಖೆ, ಬೆಂಗಳೂರು.

**PROCEEDINGS OF THE REGISTRAR OF CO-OPERATIVE SOCIETIES IN KARNATAKA, BANGALORE.**

**No. LDB:10:LFD:2003-04 Date: 15th March 2004**

**Sub :** Floatation of Special Development Debentures by the KSCA & RD Bank under various schemes for Rs. 8,45,65,500/- issue of orders-reg.

**Ref :**
1. Proposal No. FS:DEB:825:2003-04 Dated: 10.3.2004 of the KSCA & RD Bank Ltd., Bangalore addressed to NABARD, Bangalore, forwarding the proposal for Floatation of Special Development Debentures for Rs 8,45,65,500/- for their approval.
2. Letter. No. NB/(BL)/ICD:9972:LDB-12:2003-04 Dated: 12.3.2004 of the NABARD, Bangalore addressed to the Managing Director, KSCA & RD Bank, Under copy to the Registrar of Co-operative Societies in Karnataka, Bangalore conveying their approval to the proposal cited above at 1, for Rs. 8,45,65,500/-
3. Government O.M. No. FD. 95 RLG: 68: Dated: 11.11.1971.
4. G. O. No. CMW: 134: CLS 2002, Bangalore Dated: 1.8.2003 Sanctioning the Government Guarantee for Rs. 166.00 crores on behalf of the KSCA & RD Bank for the year 2003-2004.
5. Proposal No. FS:DEB:838:2003-04 dated: 13.3.2004 of the KSCA & RD Bank, addressed to this Office requesting for issue of orders for the floatation of the debentures apporved by the NABARD as cited in Ref. 2 above.

**Preamble:**

The Karnataka State Co-operative Agriculture and Rural Development Bank Ltd., in its letter cited (1) has forwarded a proposal to the National Bank for Agriculture and Rural Development, Bangalore for

floatation of Special Development Debentures under Various schemes for Rs. 8,45,65,500/- and has requested them for their approval. On considering the proposal of the KARNATAKA STATE CO-OPERATIVE AGRICULTURE AND RURAL DEVELOPMENT BANK cited above at (1) the National Bank for Agriculture and Rural Development, Bangalore in their letter above at (2) has conveyed their approval for the floatation and agreed to subscribe to Special Development Debentures floated by the Bank to the extent of Rs. 7,69,13,900/- The contribution from State Government and Central Government is to the extent of Rs. 38,25,800/- each. Government in its O.M. cited above at (3) has prescribed the terms and conditions to be imposed by Government while guaranteeing the debentures to be floated by any institution. In the Government order cited above at (4), Government has issued the Government guarantee on behalf of the Karnataka State Co-operative Agriculture and Rural Development Bank for the year 2003-2004 and has authorised the Registrar of Co-operative Societies to issue order etc., upto Rs.10.00 crore on each occasion, and to make the contribution to the debentures according to the pattern approved by the NABARD. All the relevant terms and conditions applicable to the Karnataka State Co-operative Agriculture and Rural Development Bank as per references cited above at (3) and (4) are to be followed. The Karnataka State Co-operative Agriculture and Rural Development Bank, in its letter cited at (5) has requested this office for issue of orders for floatation of debentures as approved by the National Bank for Agriculture and Rural Development vide reference cited above at (2).

**ORDER**

1) Registrar of Co-operative Societies in Karnataka, Bangalore, hereby permits the Karnataka State Co-operative Agriculture and Rural Development Bank Ltd., Bangalore, as per Government Order cited at reference (4) above to float Special Development Debentures to the extent of Rs.8,45,65,500/- (Rupees Eight Crore Fortyfive lakhs Sixtyfive thousand Five hundred only) limiting the amount of debentures to the value of accumulated un-encumbered mortgages secured for implementing the National Bank for Agriculture and Rural Development Scheme, as per the details indicated hereunder, subject to the terms and conditions stipulated in the ANNEXURE-1 to this order.

1) Sanction is hereby accorded to contribute a sum of Rs.38,25,800/- (Rupees Thirtyeight lakhs Twenty five thousand Eight hundred only) being the State Government share of contribution to the various Special Development Debentures to be floated by the Karnataka State Co-operative Agriculture and Rural Development Bank Ltd., Bangalore, as approved by the National Bank for Agriculture and Rural Development vide their letter above at (2).

2) The currency for floating these debentures would be up to 31.3.2004

3) General Manager and Manager of the Karnataka State Co-operative Agriculture and Rural Development Bank are authorised jointly to draw the amount on a payees receipt duly countersigned by the Additional Registrar of Co-operative Societies (ADM & DEV), Head Office, Bangalore.

The expenditure of Rs. 28,14,100/- (Rupees: Twentyeight lakhs Fourteen thousand One hundred Only) in this behalf towards Government of Karnataka Share of contribution may be met under the budget Head "6416-Loans for Agricultural Financial Institutions-190 Loans to public sector and other undertakings-1-K.S. Co-operative Agriculture and R D Bank-01 Loans for purchase of debentures. "(6416-00-190-1-01).

PR-437 Registrar of Co-operative Societies, in Karnataka, Bangalore.

**PROCEEDINGS OF THE REGISTRAR OF CO-OPERATIVE SOCIETIES IN KARNATAKA, BANGALORE.**

**No. LDB:9:LFD:2003-04 Date: 5th March 2004**

**Sub :** Floatation of Special Development Debentures by the KSCA & RD Bank under various schemes for Rs. 7,52,06,700/- issue of orders-reg.

**Ref :**

1. Proposal No. FS:DEB:793:2003-04 Dated: 16.2.2004 of the KSCA&RD Bank Ltd., Bangalore addressed to NABARD, Bangalore, forwarding the proposal for Floatation of Special Development Debentures for Rs 7,52,06,700/- for their approval.
2. Letter.No.NB:(BL)ICD:9330:LDB-12:2003-04 Dated: 19.2.2004 of the NABARD, Bangalore addressed to the Managing Director, KSCA & RD Bank, Under copy to the Registrar of Co-operative Societies in Karnataka, Bangalore conveying their approval to the proposal cited above at 1, for Rs. 7,52,06,700/-
3. Government O.M. No. FD. 95 RLG: 68: Dated: 11.11.1971.
4. Letter No. CMW: 134: CLS 2002, Bangalore Dated: 1.8.2003 Sanctioning the Government Guarantee for Rs. 166.00 crores on behalf of the KSCA & RD Bank for the year 2003-2004.
5. Proposal No. FS:DEB:815:2003-04 dated: 3.3.2004 of the KSCA & RD Bank, addressed to this Office requesting for issue of orders for the floatation of the debentures apporved by the NABARD as cited in Ref. 2 above.

**Preamble:**

The Karnataka State Co-operative Agriculture and Rural Development Bank Ltd., in its letter cited (1) has forwarded a proposal to the National Bank for Agriculture and Rural Development, Bangalore for floatation of Special Development Debentures under Various schemes for Rs. 7,52,06,700/- and has requested them for their approval On considering the proposal of the KARNATAKA STATE CO-OPERATIVE AGRICULTURE AND RURAL DEVELOPMENT BANK cited above at (1) the National Bank for Agriculture and Rural Development, Bangalore in their letter above at (2) has conveyed their approval for the floatation and agreed to subscribe to Special Development Debentures floated by the Bank to the extent of Rs. 6,95,78,500/- The contribution from State Government and Central Government is to the extent of Rs. 28,14,100/- each. Government in its O.M. cited above at (3) has prescribed the terms and conditions to be imposed by Government while guaranteeing the debentures to be floated by any institution. In the Government order cited above at (4), Government has issued the Government guarantee on behalf of the Karnataka State Co-operative Agriculture and Rural Development Bank for the year 2003-2004 and has authorised the Registrar of Co-operative Societies to issue order etc., upto Rs.10.00 crore on each occasion, and to make the contribution to the debentures according to the pattern approved by the NABARD. All the relevant terms and conditions applicable to the Karnataka State Co-operative Agriculture and Rural Development Bank as per references cited above at (3) and (4) are to be followed. The Karnataka State Co-operative Agriculture and Rural Development Bank, in its letter cited at (5) has requested this office for issue of orders for floatation of debentures as approved by the National Bank for Agriculture and Rural Development vide reference cited above at (2).

**ORDER**

1) Registrar of Co-operative Societies in Karnataka, Bangalore, hereby permits the Karnataka State Co-operative Agriculture and Rural Development Bank Ltd., Bangalore, to float Special Development Debentures to the extent of Rs.7,52,06,700/- (Rupees Seven Crores Fiftytwo lakhs Six thousand Seven hundred only) limiting the amount of debentures to the value of accumulated un-encumbered mortgages secured for implementing the National Bank for Agriculture and Rural Development Scheme, as per the details indicated hereunder, subject to the terms and conditions stipulated in the ANNEXURE-1 to this order.

1) Sanction is hereby accorded to contribute a sum of Rs.28,14,100/- (Rupees Twentyeight lakhs Fourteen thousand One hundred only) being the State Government share of contribution to the various Special Development Debentures to be floated by the Karnataka State Co-operative Agriculture and Rural Development Bank Ltd., Bangalore, as approved by the National Bank for Agriculture and Rural Development vide their letter above at (2).

2) The currency for floating these debentures would be up to 31.3.2004

3) General Manager and Manager of the Karnataka State Co-operative Agriculture and Rural Development Bank are authorised jointly to draw the amount on a payees receipt duly countersigned by the Additional Registrar of Co-operative Societies (ADM & DEV), Head Office, Bangalore.

The expenditure of Rs. 38,25,800/- (Rupees: Twentyeight lakhs Twentyfive thousand Eight hundred Only) in this behalf towards Government of Karnataka Share of contribution may be met under the budget Head "6416-Loans for Agricultural Financial Institutions-190 Loans to public sector and other undertakings-1-K.S. Co-operative Agriculture and R D Bank-01 Loans for purchase of debentures. "(6416-00-190-1-01).

PR-438 Registrar of Co-operative Societies, in Karnataka, Bangalore.

**ಮಾನ್ಯ 3ನೇ ಎಸಿಎಂಎಂ ನ್ಯಾಯಾಲಯದ ದಂಡಾಧಿಕಾರಿಗಳ ಸನ್ನಿಧಾನಕ್ಕೆ ಬೆಂಗಳೂರು ನಗರ.**

**ವಿಷಯ :** ಮಾಗಡಿರಸ್ತೆ ಪೊಲೀಸ್ ಠಾಣೆಯಲ್ಲಿ ವಾರಸುದಾರರಿಲ್ಲದ ಮಾಲುಗಳನ್ನು ಅಮಾನತ್ತುಪಡಿಸಿಕೊಂಡು ಮಾಲುಗಳ ವಾರಸುದಾರರು ಪತ್ತೆಯಾಗದೇ ಇದ್ದುದರಿಂದ ಬಹಿರಂಗವಾಗಿ ಹರಾಜು ಮಾಡುವ ಬಗ್ಗೆ.

ಮೇಲಿನ ವಿಷಯದ ಬಗ್ಗೆ ನಿವೇದಿಸಿಕೊಳ್ಳುವುದೇನೆಂದರೆ ಮಾಗಡಿ ರಸ್ತೆ ಪೊಲೀಸ್ ಠಾಣೆಯಲ್ಲಿ ವಾರಸುದಾರರಿಲ್ಲದ ಈ ಕೆಳಕಂಡಂತೆ ನಮೂದಿಸಿರುವ ಮಾಲುಗಳನ್ನು ಅಮಾನತ್ತುಪಡಿಸಿದೆ. ಇದರ ವಾರಸುದಾರರನ್ನು ಪತ್ತೆ ಹಚ್ಚಲು ಎಲ್ಲಾ ಪೊಲೀಸ್ ಠಾಣೆಗಳಿಗೂ ಕಂಪ್ಯೂಟರ್ ಮೂಲಕ ಕಳುಹಿಸಿದ್ದು. ಸಿ.ಸಿಆರ್‌ಎಸ್‌ನಿಂದಲೂ ಎಲ್ಲಾ ಠಾಣೆಗಳಿಗೂ ಕಳುಹಿಸಲಾಗಿತ್ತಾದರೂ ಸಹಾ ಇಲ್ಲಿಯವರೆಗೆ ಮಾಲಿನ ವಾರಸುದಾರರು ಪತ್ತೆಯಾಗಿರುವುದಿಲ್ಲ. ವಾಹನಗಳ ಬಗ್ಗೆ ಆರ್.ಟಿ.ಓನಲ್ಲಿ ಹೋಗಿ ವಿಳಾಸಗಳನ್ನು ತಂದು ಪರಿಶೀಲಿಸಿದಾಗ ವಿಳಾಸ ಪತ್ತೆಯಾಗಿಲ್ಲ ನಂಬರ್ ಬೇರೆ ಬೇರೆ ಗಾಡಿಗಳದಾಗಿರುತ್ತವೆ. ಆದ್ದರಿಂದ ಈ ಮಾಲುಗಳ ವಾರಸುದಾರರನ್ನು ಪತ್ತೆ ಹಚ್ಚಲು ಎಲ್ಲಾ ಪ್ರಯತ್ನಗಳನ್ನು ಮಾಡಿದರೂ ಸಹಾ ಪತ್ತೆಯಾಗದೇ ಇದ್ದುದರಿಂದ ಈ ಮಾಲುಗಳನ್ನು ಬಹಿರಂಗವಾಗಿ ಹರಾಜು ಮಾಡಲಾಗುವುದೆಂದು ಈ ಮೂಲಕ ಪ್ರಕಟಿಸಲಾಗಿದೆ.

| ಕ್ರ. ಸಂ. | ಸಿಮೀಸ್ ಸಂಖ್ಯೆ | ಪಿ.ಎಫ್ ಸಂಖ್ಯೆ | ಅಮಾನತ್ತುಪಡಿಸಲಾದ ಮಾಲು | ಅಮಾನತ್ತುಪಡಿಸಿದ ಮಾಲು |
|---|---|---|---|---|
| 1. | 113/98 | 40/98 | 1. ನಗದು ಹಣ ರೂ. 1400/-<br>2. ಒಂದು ಪ್ಲಾಸ್ಟಿಕ್ ಮಣಿಸರ<br>3. ನೀಲಿ ಕಲರ್ ಪರ್ಸ್ ಸರಸ್ವತಿ ಜ್ಯೂಯಲರ್ಸ್ ಎಂದು ಬರೆಯಲಾಗಿದೆ. | 12.02.98 |
| 2. | 242/98 | 87/98 | 1. ಒಂದು ಹಸಿರು ಬಣ್ಣದ ಕಪ್ಪು ಡಿಸೈನ್ ಸೀರೆ<br>2. ಒಂದು ಮ್ಯಂತೆ ಬಣ್ಣದ ಕಾಫಿ ಬಾರ್ಡರ್ ಸಿಲ್ಕ್ ಸೀರೆ<br>3. ಒಂದು ಬ್ಲೂ ಕಲರ್ ಕೆಂಪು ಬಾರ್ಡರ್ ಪಾಲಿಸ್ಟರ್ ಸೀರೆ<br>4. ಒಂದು ನೇರಳೆ ಬಣ್ಣದ ನೀಲಿ ಬಾರ್ಡರ್ ಪಾಲಿಸ್ಟರ್ ಸೀರೆ<br>5. ಒಂದು ಹಸಿರು ಬಣ್ಣದ ಪಾಲಿಸ್ಟರ್ ಸೀರೆ<br>6. ಒಂದು ಸಿಮೆಂಟ್ ಕಲರ್ ಪಾಲಿಸ್ಟರ್ ಸೀರೆ<br>7. ಒಂದು ತಿಳಿ ಬಣ್ಣದ ಬಾರ್ಡರ್ ಪಾಲಿಸ್ಟರ್ ಸೀರೆ<br>8. ಒಂದು ಗಿಳಿ ಹಸಿರು ಬಣ್ಣದ ನೀಲಿ ಬಾರ್ಡರ್ ಪಾಲಿಸ್ಟರ್ ಸೀರೆ<br>9. ಒಂದು ಚಾಕೊಲೆಟ್ ಬಣ್ಣದ ಪ್ರಿಂಟೆಡ್ ಸಿಲ್ಕ್ ಸೀರೆ<br>10. ಒಂದು ಕುಂಕುಮ ಬಣ್ಣದ ಸಿಲ್ಕ್ ಸೀರೆ<br>11. ಒಂದು CAMPION ಸಿಮೆಂಟ್ ಕಲ್ಲರ್ ಸೂಟ್ ಕೇಸು<br>12. ಒಂದು ಪ್ಲಾಸ್ಟಿಕ್ ಬಾಕ್ಸ್‌ನಲ್ಲಿ ಏಸು & ಮೇರಿಯಾ ಪ್ಲಾಸ್ಟಿಕ್ ಸಿಲುಬೆ ಗೊಂಬೆ<br>13. ಒಂದು ಡೈರಿ ಕೆಲವು ವಿಳಾಸ ಬರೆದಿರುತ್ತೆ.<br>14. ಒಂದು ಕೆಂಪು ರೆಗ್ಜಿನ್ ಪರ್ಸ್ ಇದರಲ್ಲಿ ಕೆಲವು ಚೀಟಿಗಳಿರುತ್ತವೆ. | 05.04.98 |
| 3. | 731/98 | 199/98 | 1. ಒಂದು ಅಟ್ಟ ಸಿಲ್ಕ್ ಸೀರೆಗಳು<br>2. 2 ನೈಲಾನ್ ಸೀರೆಗಳು<br>3. 5 ಬೌಸ್‌ಗಳು | 07.11.98 |
| 4. | 780/98 | 219/98 | ಒಂದು 9 ಗ್ರಾಂ ತೂಕದ ಚಿನ್ನದಂತಿರುವ ಕಟಿಂಗ್ ಕೊರಳ ಚೈನು | 30.11.98 |
| 5. | 458/99 | 198/99 | ಒಂದು ಎಲ್.ಎಂ.ಎಲ್ ವೆಸ್ಪಾ ಸ್ಕೂಟರ್ ನಂ. ಕೆಎ.02-ಆರ್.6908 | 18.09.99 |
| 6. | 80/03 | 21/03 | ಒಂದು ಬಜಾಜ್ ಸ್ಕೂಟರ್ ಎಂ.ಇ.ಜೆ. 3182 | 25.02.03 |
| 7. | 253/03 | 50/03 | ಒಂದು ಬಿಳಿಯ ಬಣ್ಣದ ಮಾರುತಿ ವ್ಯಾನ್ ನಂ. ಕೆಎ.03-2552 | 07.05.03 |

ಪಿ.ಆರ್.439 ಪೋಲಿಸ್ ಇನ್ಸ್‌ಪೆಕ್ಟರ್ ಮಾಗಡಿ ರಸ್ತೆ ಪೊಲೀಸ್ ಠಾಣೆ, ಬೆಂಗಳೂರು-560 023.

## PROCEEDINGS OF THE REGISTRAR OF CO-OPERATIVE SOCIETIES IN KARNATAKA, BANGALORE.

**No. LDB:11:LFD:2003-04 Date: 15th March 2004**

**Sub :** Floatation of Special Development Debentures by the KSCA & RD Bank under various schemes for Rs. 1,55,65,000/- issue of orders-reg.

**Ref :**
1. Proposal No. FS:DEB:825:2003-04 Dated: 10.3.2004 of the KSCA&RD Bank Ltd., Bangalore addressed to NABARD, Bangalore, forwarding the proposal for Floatation of Special Development Debentures for Rs 1,55,65,000/- for their approval.
2. Letter.No.NB:(BL)ICD:9972:LDB-12:2003-04 Dated: 12.3.2004 of the NABARD, Bangalore addressed to the Managing Director, KSCA & RD Bank, Under copy to the Registrar of Co-operative Societies in Karnataka, Bangalore conveying their approval to the proposal cited above at 1, for Rs. 1,55,65,000/-
3. Government O.M. No. FD. 95 RLG: 68: Dated: 11.11.1971.
4. G. O. No. CMW: 134: CLS 2002, Bangalore Dated: 1.8.2003 Sanctioning the Government Guarantee for Rs. 166.00 crores on behalf of the KSCA & RD Bank for the year 2003-2004.
5. Proposal No. FS:DEB:839:2003-04 dated: 13.3.2004 of the KSCA & RD Bank, addressed to this Office requesting for issue of orders for the floatation of the debentures apporved by the NABARD as cited in Ref. 2 above.

**Preamble:**

The Karnataka State Co-operative Agriculture and Rural Development Bank Ltd., in its letter cited (1) has forwarded a proposal to the National Bank for Agriculture and Rural Development, Bangalore for floatation of Special Development Debentures under Various schemes for Rs. 1,55,65,000/- and has

requested them for their approval. On considering the proposal of the KARNATAKA STATE CO-OPERATIVE AGRICULTURE AND RURAL DEVELOPMENT BANK cited above at (1) the National Bank for Agriculture and Rural Development, Bangalore in their letter above at (2) has conveyed their approval for the floatation and agreed to subscribed to Special Development Debentures floated by the Bank to the extent of Rs. 1,55,65,000/- Government in its O.M. cited above at (3) has prescribed the terms and conditions to be imposed by Government while guaranteeing the debentures to be floated by any institution. In the Government order cited above at (4), Government has issued the be floated by any institution. In the Government order cited above at (4), Government has issued the Government guarantee on behalf of the Karnataka State Co-operative Agriculture and Rural Development Bank for the year 2003-2004 and has authorised the Registrar of Co-operative Societies to issue order etc., upto Rs. 10.00 crore on each occasion, and to make the contribution to the debentures according to the pattern approved by the NABARD. All the relevant terms and conditions applicable to the Karnataka State Co-operative Agriculture and Rural Development Bank as per references cited above at (3) and (4) are to be followed. The Karnataka State Co-operative Agriculture and Rural Development Bank, in its letter cited at (5) has requested this office for issue of orders for floatation of debentures as approved by the National Bank for Agriculture and Rural Development vide reference cited above at (2).

**ORDER**

1) Registrar of Co-operative Societies in Karnataka, Bangalore, hereby permits the Karnataka State Co-operative Agriculture and Rural Development Bank Ltd., Bangalore, as per Government Order cited at reference (4) above to float Special Development Debentures to the extent of Rs.1,55,65,000/- (Rupees one crore Fiftyfive lakhs Sixtyfive thousand only) limiting the amount of debentures to the value of accumulated un-encumbered mortgages secured for implementing the National Bank for Agriculture and Rural Development Scheme, as per the details indicated hereunder, subject to the terms and conditions stipulated in the ANNEXURE-1 to this order.

PR-440 Registrar of Co-operative Societies, in Karnataka, Bangalore.

**ನಿರ್ದೇಶಕರು, ಗಣಿ ಮತ್ತು ಭೂವಿಜ್ಞಾನ ಇಲಾಖೆ, ಬೆಂಗಳೂರು ರವರ ನಡವಳಿಗಳು**

**ವಿಷಯ :** ಬೆಂಗಳೂರು ಗ್ರಾಮಾಂತರ ಜಿಲ್ಲೆ, ಕನಕಪುರ ತಾಲ್ಲೂಕು, ಮರಳೇಬೇಕುಪ್ಪೆ ಗ್ರಾಮದಲ್ಲಿ ಕಪ್ಪು ಶಿಲೆಗಾಗಿ ಮೆ: ಶಿಲ್ಪ ಗ್ರಾನೈಟ್ಸ್ ಎಕ್ಸ್‌ಪೋರ್ಟ್ಸ್ ರವರಿಗೆ ಕಲ್ಲು ಗಣಿ ಗುತ್ತಿಗೆ ಸಂಖ್ಯೆ: 466ರ ಗುತ್ತಿಗೆಯನ್ನು ರದ್ದುಗೊಳಿಸುವ ಬಗ್ಗೆ.

**ಉಲ್ಲೇಖ :**
1. ಕೇಂದ್ರ ಕಛೇರಿ ಪತ್ರ ಸಂಖ್ಯೆ: ಗಭೂಇ: ಡಿಸಿಬಿ:ಕಗಗು:466:2002-03:6374 ದಿನಾಂಕ: 17.3.2003
2. ಉಪ ನಿರ್ದೇಶಕರು, ಕನಕಪುರ ರವರ ಪತ್ರ ಸಂಖ್ಯೆ:ಗಭೂಇ: ಉನಿಕ:ಕಗಗು466: 2003-04: 5906 ದಿನಾಂಕ: 28.8.2003.

**ಪ್ರಸ್ತಾವನೆ:**

ಬೆಂಗಳೂರು ಗ್ರಾಮಾಂತರ ಜಿಲ್ಲೆ, ಕನಕಪುರ ತಾಲ್ಲೂಕು, ಮರಳೇಬೇಕುಪ್ಪೆ ಗ್ರಾಮದ ಸರ್ವೆ ನಂ. 572 ರಲ್ಲಿ ಮೆ: ಶಿಲ್ಪ ಗ್ರಾನೈಟ್ಸ್ ಎಕ್ಸ್‌ಪೋರ್ಟ್ಸ್ ರವರಿಗೆ 6.00 ಎಕರೆಗೆ ದಿನಾಂಕ: 12.9.2001 ರಿಂದ 10 ವರ್ಷಗಳಿಗಾಗಿ ಕಲ್ಲು ಗಣಿ ಗುತ್ತಿಗೆ ಮಂಜೂರು ಮಾಡಲಾಗಿತ್ತು. ಉಲ್ಲೇಖಿಸಿರುವ ಪತ್ರಗಳಡಿಯಲ್ಲಿ ಗುತ್ತಿಗೆದಾರರಿಗೆ ನಿಯಮಾನುಸಾರ ಸೂಚನಾ ಪತ್ರ ನೀಡಿ 2003ರ ಮಾರ್ಚ್ ಅಂತ್ಯದವರೆಗೆ ಬಾಕಿ ರೂ.1,25,774.00 ಗಳನ್ನು ಪಾವತಿಸುವಂತೆ ತಿಳಿಸಲಾಗಿತ್ತು.

ಗಣಿ ಮತ್ತು ಭೂ ವಿಜ್ಞಾನ ಇಲಾಖೆಯ ನಿರ್ದೇಶಕರ ಗಮನಕ್ಕೆ ಬಂದಂತೆ ಗುತ್ತಿಗೆದಾರರು ಮೇಲಿನ ಉಲ್ಲೇಖಿತ ಪತ್ರ 1ರ ಅಂತಿಮ ನೋಟೀಸಿಗೆ ಯಾವ ರೀತಿಯೂ ಸ್ಪಂದಿಸಿರುವುದಿಲ್ಲವಾದ ಕಾರಣ ಹಾಗೂ ಉಲ್ಲೇಖಿತ ಪತ್ರದ 2ರಲ್ಲಿ ತಿಳಿಸಿದಂತೆ ಗುತ್ತಿಗೆಯನ್ನು ನಿಷ್ಕ್ರಿಯವಾಗಿಟ್ಟಿರುವುದರಿಂದ ಕರ್ನಾಟಕ ಉಪ ಖನಿಜ ರಿಯಾಯಿತಿ ನಿಯಮ 1994ರ ನಿಯಮ 6(1) ಮತ್ತು 39 ರಂತೆ ಸರ್ಕಾರದ ಅಧಿಸೂಚನೆ III ಸಂಖ್ಯೆ:ಸಿಐ 418 ಎಂಆರ್‌ಸಿ 92 ದಿನಾಂಕ: 2.7.94 ರಲ್ಲಿ ಪ್ರತ್ಯೋಜಿಸಿರುವ ಅಧಿಕಾರದಂತೆ ಗುತ್ತಿಗೆಯನ್ನು ರದ್ದುಪಡಿಸಬೇಕಾಗಿದೆ.

**ಆದೇಶ**

**ಆದೇಶ ಸಂಖ್ಯೆ:ಗಭೂಇ:ಡಿಸಿಬಿ:ಕಗಗು:466:2003-04:19614:ದಿನಾಂಕ: 16ನೇ ಮಾರ್ಚ್ 2004**

ಕರ್ನಾಟಕ ಉಪ ಖನಿಜ ರಿಯಾಯಿತಿ ನಿಯಮ 1994ರ ನಿಯಮ 6(1) ಮತ್ತು 39 ರಂತೆ ಗಣಿ ಮತ್ತು ಭೂ ವಿಜ್ಞಾನ ಇಲಾಖೆಯ ನಿರ್ದೇಶಕರಿಗೆ ಪ್ರತ್ಯೋಜಿಸಿರುವ ಅಧಿಕಾರದಡಿಯಲ್ಲಿ ಬೆಂಗಳೂರು ಗ್ರಾಮಾಂತರ ಜಿಲ್ಲೆ, ಕನಕಪುರ ತಾಲ್ಲೂಕಿನ, ಮರಳೇಬೇಕುಪ್ಪೆ ಗ್ರಾಮದ ಸರ್ವೆ ನಂ. 572 ರಲ್ಲಿ 6.00 ಎಕರೆಗೆ ಕಪ್ಪು ಶಿಲೆಗಾಗಿ ನೀಡಿದ್ದ ಕಲ್ಲು ಗಣಿ ಗುತ್ತಿಗೆ ಸಂಖ್ಯೆ: 466ನ್ನು ತಕ್ಷಣದಿಂದ ಜಾರಿಗೆ ಬರುವಂತೆ ಲ್ಯಾಪ್ಸ್ಡ್ ಲೀಸ್ ಎಂದು ಪರಿಗಣಿಸಿ ಗುತ್ತಿಗೆಯನ್ನು ರದ್ದುಪಡಿಸಲಾಗಿದೆ. ಹಾಗೂ ಈ ಗುತ್ತಿಗೆಗೆ ಸಲ್ಲಿಸಿದ್ದ ಜಾಮೀನು ಠೇವಣಿಯನ್ನು ಇಲಾಖೆಗೆ ಮುಟ್ಟುಗೋಲು ಮಾಡಿಕೊಳ್ಳಲಾಗಿದೆ.

ಪಿ.ಆರ್. 441 ನಿರ್ದೇಶಕರು, ಗಣಿ ಮತ್ತು ಭೂವಿಜ್ಞಾನ ಇಲಾಖೆ, ಬೆಂಗಳೂರು.

**ಸಹಕಾರ ಇಲಾಖೆ**

**ಸಹಕಾರ ಸಂಘಗಳ ಸಹಾಯಕ ನಿಬಂಧಕರ ನ್ಯಾಯಾಲಯ, ಶಿವಮೊಗ್ಗ ಉಪವಿಭಾಗ, ಶಿವಮೊಗ್ಗ**

**ಅಧಿಭಾರ ಅರ್ಜಿ ನಂ. 8:03-04**

**ಅರ್ಜಿದಾರರು :** ವ್ಯವಸಾಯ ಸೇವಾ ಸಹಕಾರ ಬ್ಯಾಂಕ್ (ನಿ), ಮಂಡಘಟ್ಟ, ಶಿವಮೊಗ್ಗ ತಾಲ್ಲೂಕು.

**ವಿರುದ್ಧ**

**ಎದುರು ಅರ್ಜಿದಾರರು:** ಶ್ರೀ ಕೆ. ಎಂ. ಮಹೇಶ್, ಮಾಜಿ ಪಿಗ್ಮಿ ಏಜೆಂಟ್, ವಿಎಸ್‌ಎಸ್‌ಬಿಎನ್, ಮಂಡಘಟ್ಟ.

**(ಕರ್ನಾಟಕ ಸಹಕಾರ ಸಂಘಗಳ ಅಧಿನಿಯಮ 1959ರ ಕಲಂ 103ರ ಮೇರೆಗೆ ತೀರ್ಪು ಪೂರ್ವ ಜಪ್ತು ಆಜ್ಞೆ)**

**ಪ್ರಸ್ತಾವನೆ:**

ಅರ್ಜಿದಾರರ ಬ್ಯಾಂಕು ಈ ನ್ಯಾಯಾಲಯದಲ್ಲಿ ಸಹಕಾರ ಸಂಘಗಳ ಕಾಯ್ದೆ 1959ರ ಕಲಂ 69 ರಡಿಯಲ್ಲಿ ಎದುರು ಅರ್ಜಿದಾರರ ವಿರುದ್ಧ 1999-2000ನೇ ಸಾಲಿನ ಲೆಕ್ಕಪರಿಶೋಧನಾ ವರದಿಯಂತೆ ರೂ. 29954-00 ಗಳ ಪಿಗ್ಮಿ ಹಣ ದುರುಪಯೋಗದ ವಸೂಲಿ ಬಗ್ಗೆ ಎದುರಿಗಳ ಮೇಲೆ ಅಧಿಭಾರ ಅರ್ಜಿಯನ್ನು ದಾಖಲು ಮಾಡಿದ್ದು, ಈ ಸಂಬಂಧವಾಗಿ ದಿನಾಂಕ: 3.3.2004 ರಂದು ಅರ್ಜಿದಾರರು ನೀಡಿದ ಕಲಂ 103ರ ಅರ್ಜಿಯಲ್ಲಿ ಅರ್ಜಿದಾರರ ಬ್ಯಾಂಕ್ ಎದುರು ಅರ್ಜಿದಾರರ ವಿರುದ್ಧ ಪಿಗ್ಮಿ ಹಣ ದುರುಪಯೋಗದ ಬಾಬ್ತು ವಸೂಲಿಗಾಗಿ ಕಾಯ್ದೆ ಕಲಂ 69ರ ಅಡಿಯಲ್ಲಿ ಅರ್ಜಿದಾರರ ಬ್ಯಾಂಕಿನ ಪರವಾಗಿ ಡಿಕ್ರಿ ಕೋರಿ ಪ್ರಕರಣ ದಾಖಲಿಸಿದ್ದು, ಶ್ರೀ ಕೆ. ಎಂ. ಮಹೇಶ್, ಇವರ ವಾರಸುದಾರರಾದ ಶ್ರೀ ಕೆ. ಪಿ. ಮಲ್ಲೇಶಪ್ಪ, ಬಿನ್ ಚನ್ನಬಸಪ್ಪ, ತಂದೆ, ಇವರ ಹೆಸರಿನಲ್ಲಿರುವ ಸ್ಥಿರ ಸ್ವತ್ತನ್ನು ಪರಭಾರೆ: ಮಾರಾಟ ಮಾಡಲು ತಯಾರಿ ನಡೆಸುತ್ತಿರುವುದಾಗಿ ತಿಳಿದು ಬಂದಿದೆ. ಹಾಗೇನಾದರೂ ಎದುರು ಅರ್ಜಿದಾರರುಗಳು ಸ್ಥಿರ ಸ್ವತ್ತನ್ನು ಮಾರಾಟ: ಪರಬಾರೆ ಮಾಡಿದ್ದೇ ಆದಲ್ಲಿ ದುರುಪಯೋಗದ ಹಣ ವಸೂಲಾತಿ ಆಗದೇ ಇರುವಂತಹ ಪರಿಸ್ಥಿತಿ ಇರುವ ಪ್ರಯುಕ್ತ ಅರ್ಜಿದಾರ ಬ್ಯಾಂಕ್ ಘನ ನ್ಯಾಯಾಲಯದಲ್ಲಿ ಎದುರು ಅರ್ಜಿದಾರರ ವಾರಸುದಾರರಾದ ಶ್ರೀ ಕೆ. ಸಿ. ಮಲ್ಲೇಶಪ್ಪ, ಬಿನ್ ಚನ್ನಬಸಪ್ಪ (ತಂದೆ) ಇವರ ಹೆಸರಿನಲ್ಲಿರುವ ಆಸ್ತಿಯನ್ನು ಆದೇಶಕ್ಕಿಂತ ಪೂರ್ವದಲ್ಲಿ ಸಹಕಾರ ಸಂಘಗಳ ಕಾಯ್ದೆ ಕಲಂ 103 ರಡಿಯಲ್ಲಿ ತೀರ್ಪು ಪೂರ್ವ ಜಪ್ತಿ ಕ್ರಮವನ್ನು ಈ ದಾವೆಯಲ್ಲಿ ನೀಡಬಹುದಾದ ಡಿಕ್ರಿಯನ್ನು ನಿರರ್ಥಕಗೊಳಿಸುವ ಉದ್ದೇಶದಿಂದ ಬೇರೆಯವರಿಗೆ ಪರಭಾರೆ ಮಾಡುವ ಅಥವಾ ಮಾರಾಟ ಮಾಡುವ ಕ್ರಮವನ್ನು ಪ್ರತಿಬಂಧಿಸಬೇಕೆಂದು ಕೋರಿದ್ದಾರೆ. ಈ ಕೋರಿಕೆ ಯುಕ್ತವಾಗಿದೆಯೆಂದು ಸ್ವತಃ ಈ ನ್ಯಾಯಾಲಯಕ್ಕೆ ಮನವರಿಕೆಯಾಗಿದ್ದು, ಈ ಕೆಳಕಂಡ ಷರತ್ತು ಪೂರ್ವ ಜಪ್ತು ಆಜ್ಞೆಯ ನೋಟೀಸನ್ನು ಹೊರಡಿಸಲಾಗಿದೆ.

**ಆದೇಶ**

**ಕ್ರಮಾಂಕ: ಸನಿಶಿ:24:ಎಬಿಎನ್:ಕಲಂ 103:03-04 ದಿನಾಂಕ: 12ನೇ ಮಾರ್ಚ್ 2004**

ಪ್ರಸ್ತಾವನೆಯಲ್ಲಿ ವಿವರಿಸಿರುವ ಸಂದರ್ಭಗಳ ಹಿನ್ನೆಲೆಯಲ್ಲಿ ಎ. ಎಸ್. ಜಯಪ್ಪ, ಸಹಕಾರ ಸಂಘಗಳ ಸಹಾಯಕ ನಿಬಂಧಕರು, ಶಿವಮೊಗ್ಗ ಉಪವಿಭಾಗ, ಶಿವಮೊಗ್ಗ ಆದ ನಾನು ಕರ್ನಾಟಕ ಸಹಕಾರ ಸಂಘಗಳ ಕಾಯ್ದೆ 1959ರ ಕಲಂ 103 ರನ್ವಯ ದತ್ತವಾದ ಅಧಿಕಾರವನ್ನು ಉಪಯೋಗಿಸಿ ಈ ಆದೇಶದೊಂದಿಗೆ ಇರುವ ಅನುಸೂಚಿ (ಷೆಡ್ಯೂಲ್)ಯಲ್ಲಿ ಕಾಣಿಸಿರುವ ಸ್ಥಿರಾಸ್ತಿಗಳನ್ನು ಅಧಿಭಾರ ಅರ್ಜಿಯ ತೀರ್ಪು ಪೂರ್ವದಲ್ಲಿ ಷರತ್ತು ಪೂರ್ವಕ ಜಪ್ತುಗೊಳಿಸಲಾಗಿದೆಯೆಂದು ಆದೇಶಿಸಿದೆ.

ಅಲ್ಲದೇ, ಎದುರು ಅರ್ಜಿದಾರರುಗಳು ತಮ್ಮ ಸ್ಥಿರಾಸ್ತಿಯನ್ನು ಷರತ್ತು ಪೂರ್ವ ಜಪ್ತು ಆಜ್ಞೆಯ ವ್ಯಾಪ್ತಿಯಿಂದ ಹೊರತರಲು ಇಚ್ಛಿಸಿದಲ್ಲಿ ಜಪ್ತುಗೊಳಿಸಲ್ಪಟ್ಟ ಆಸ್ತಿಯ ಮೌಲ್ಯಕ್ಕೆ ಮತ್ತು ನ್ಯಾಯಾಲಯ ಸರಿಯೆಂದು ಭಾವಿಸುವ ನಗದು ಭದ್ರತೆ (ಸೆಕ್ಯೂರಿಟಿ)ಯನ್ನು ಸಹಕಾರ ಸಂಘಗಳ ಸಹಾಯಕ ನಿಬಂಧಕರು, ಶಿವಮೊಗ್ಗ ಉಪವಿಭಾಗ, ಶಿವಮೊಗ್ಗ, ಇವರ ಹೆಸರಿನಲ್ಲಿ ಶಿವಮೊಗ್ಗ ಜಿಲ್ಲಾ ಸಹಕಾರ ಕೇಂದ್ರ ಬ್ಯಾಂಕ್ (ನಿ), ಶಿವಮೊಗ್ಗ ಇಲ್ಲಿ ಅಮಾನತ್ ಖಾತೆಯಲ್ಲಿ ತೊಡಗಿಸಿ, ಈ ಬಗ್ಗೆ ರಶೀದಿ ಅಥವಾ ಬ್ಯಾಂಕಿನ ಚಲನ್ನಿನ ಪ್ರತಿಯನ್ನು ದಿನಾಂಕ: 20.3.04ರ ಒಳಗೆ ಕೆಳ ಸಹಿದಾರರಿಗೆ ಹಾಜರುಪಡಿಸುವ ಮೂಲಕ ಜಪ್ತು ಆಜ್ಞೆಯಿಂದ ಹೊರಗುಳಿಯಬಹುದೆಂದು ಸಹ ಸಂಬಂಧಿಸಿದವರಿಗೆ ಈ ನೋಟೀಸ್ ನೀಡಲಾಗಿದೆ. ಭದ್ರತೆಯನ್ನು ಒದಗಿಸುವ ಮತ್ತು ಷರತ್ತು ಪೂರೈಸುವುದಕ್ಕೆ ವಿಫಲರಾದಲ್ಲಿ ಈ ಷರತ್ತು ಪೂರ್ವಕ ಜಪ್ತು ಆಜ್ಞೆಯನ್ನು ಸ್ಥಿರೀಕರಿಸಲಾಗುವುದೆಂದು ತಿಳಿಯತಕ್ಕದ್ದು.

ಈ ಆದೇಶಕ್ಕೆ ಅನುಸೂಚಿಯಲ್ಲಿರುವ ಸ್ಥಿರ ಸ್ವತ್ತುಗಳನ್ನು ಪಡೆಯುವ ಅಥವಾ ಖರೀದಿಸುವ ವ್ಯಕ್ತಿ ಅಥವಾ ಸಂಸ್ಥೆಗಳು ಸಹ ಷರತ್ತು ಪೂರ್ವಕ ಜಪ್ತು ಆಜ್ಞೆಗೆ ಒಳಪಡುವರು ಎಂದು ಸಹ ಆದೇಶಿಸಿದೆ.

ಷರತ್ತು ಪೂರ್ವಕ ಜಪ್ತು ಆದೇಶಕ್ಕೆ ಒಳಗಾದ ಸ್ವತ್ತುಗಳ ಅನುಸೂಚಿ

**ಷೆಡ್ಯೂಲ್**

| ಕ್ರಮ ಸಂಖ್ಯೆ | ಖಾತೆದಾರರ ಹೆಸರು | ಸ್ಥಿರಾಸ್ತಿ ಇರುವ ಸ್ಥಳ | ಖಾತೆ: ಸರ್ವೆ ನಂ. | ವಿಸ್ತೀರ್ಣ ಎಕರೆ ಗುಂಟೆ | ತರಹೆ |
|---|---|---|---|---|---|
| 1. | ಕೆ. ಸಿ. ಮಲ್ಲೇಶಪ್ಪ, ಬಿನ್ ಚನ್ನಬಸಪ್ಪ | ಅಡಗುಡಿ ಗ್ರಾಮ, ಹಾರನಹಳ್ಳಿ ಹೋಬಳಿ, ಶಿವಮೊಗ್ಗ ತಾ: | ಸರ್ವೆನಂ.8 ಎಂಆರ್2: 01-02 ಅ.ಬ.ದು | 0.35 | ತರಿ |

ಈ ಆದೇಶವನ್ನು ನ್ಯಾಯಾಲಯದ ಮೊಹರು ಮತ್ತು ಸ್ವಸಹಿಯೊಂದಿಗೆ ದಿನಾಂಕ: 12.03.2004 ರಂದು ನೀಡಿದೆ.

ಸಹಕಾರ ಸಂಘಗಳ ಸಹಾಯಕ ನಿಬಂಧಕರು,
ಶಿವಮೊಗ್ಗ ಉಪವಿಭಾಗ, ಶಿವಮೊಗ್ಗ.

ಪಿ.ಆರ್. 442

## ಸಹಕಾರ ಇಲಾಖೆ

## ಸಹಕಾರ ಸಂಘಗಳ ಸಹಾಯಕ ನಿಬಂಧಕರ ನ್ಯಾಯಾಲಯ, ಶಿವಮೊಗ್ಗ ಉಪವಿಭಾಗ, ಶಿವಮೊಗ್ಗ

### ಅಧಿಭಾರ ಅರ್ಜಿ ನಂ.7:03-04

**ಅರ್ಜಿದಾರರು :** ವ್ಯವಸ್ಥಾಪಕರು, ವ್ಯವಸಾಯ ಸೇವಾ ಸಹಕಾರ ಬ್ಯಾಂಕ್ (ನಿ), ಮಂಡಘಟ್ಟ, ಶಿವಮೊಗ್ಗ ತಾಲ್ಲೂಕು.

**ವಿರುದ್ಧ**

**ಎದುರು ಅರ್ಜಿದಾರರು:** ಶ್ರೀ ಕೆ. ಎಂ. ಚಂದ್ರಶೇಖರಯ್ಯ, ಮಾಜಿ ಕಾರ್ಯದರ್ಶಿ, ವಿಎಸ್‌ಎಸ್‌ಬಿಎನ್, ಮಂಡಘಟ್ಟ, ಶಿವಮೊಗ್ಗ ತಾ:

**(ಕರ್ನಾಟಕ ಸಹಕಾರ ಸಂಘಗಳ ಅಧಿನಿಯಮ 1959ರ ಕಲಂ 103ರ ಮೇರೆಗೆ ತೀರ್ಪು ಪೂರ್ವ ಜಪ್ತು ಆಜ್ಞೆ)**

**ಪ್ರಸ್ತಾವನೆ:**

ಅರ್ಜಿದಾರರ ಬ್ಯಾಂಕು ಈ ನ್ಯಾಯಾಲಯದಲ್ಲಿ ಸಹಕಾರ ಸಂಘಗಳ ಕಾಯ್ದೆ 1959ರ ಕಲಂ 69 ರಡಿಯಲ್ಲಿ ಎದುರು ಅರ್ಜಿದಾರರ ವಿರುದ್ಧ 98 ರಿಂದ 02ನೇ ಸಾಲಿನ ಲೆಕ್ಕಪರಿಶೋಧನಾ ವರದಿಯಂತೆ ರೂ. 119304-78 ಗಳ ದುರುಪಯೋಗದ ವಸೂಲಿ ಬಗ್ಗೆ ಎದುರಿಗಳ ಮೇಲೆ ಅಧಿಭಾರ ಅರ್ಜಿಯನ್ನು ದಾಖಲು ಮಾಡಿದ್ದು, ಈ ಸಂಬಂಧವಾಗಿ ದಿನಾಂಕ: 3.3.04 ರಂದು ಅರ್ಜಿದಾರರು ನೀಡಿದ ಕಲಂ 103ರ ಅರ್ಜಿಯಲ್ಲಿ ಅರ್ಜಿದಾರರ ಬ್ಯಾಂಕ್ ಎದುರು ಅರ್ಜಿದಾರರ ವಿರುದ್ಧ ನಗದು ದಾಸ್ತಾನು ದುರುಪಯೋಗದ ಬಾಬ್ತು ವಸೂಲಿಗಾಗಿ ಕಾಯ್ದೆ ಕಲಂ 69ರ ಅಡಿಯಲ್ಲಿ ಅರ್ಜಿದಾರರ ಬ್ಯಾಂಕಿನ ಪರವಾಗಿ ಡಿಕ್ರಿ ಕೋರಿ ಪ್ರಕರಣ ದಾಖಲಿಸಿದ್ದು, ಶ್ರೀ ಕೆ. ಎಂ. ಚಂದ್ರಶೇಖರಪ್ಪ, ಇವರ ಹೆಸರಿನಲ್ಲಿ ಯಾವುದೇ ಸ್ಥಿರಾಸ್ತಿ ಇಲ್ಲದೇ ಇರುವುದರಿಂದ ಅವರ ತಂದೆ ಶ್ರೀ ಕೆ. ಹೆಚ್. ಮಲ್ಲಪ್ಪ, ಇವರ ಹೆಸರಿನಲ್ಲಿರುವ ಸ್ಥಿರ ಸ್ವತ್ತನ್ನು ಪರಭಾರೆ: ಮಾರಾಟ ಮಾಡಲು ತಯಾರಿ ನಡೆಸುತ್ತಿರುವುದಾಗಿ ತಿಳಿದು ಬಂದಿದೆ. ಹಾಗೇನಾದರೂ ಎದುರು ಅರ್ಜಿದಾರರುಗಳು ಸ್ಥಿರ ಸ್ವತ್ತನ್ನು ಮಾರಾಟ: ಪರಬಾರೆ ಮಾಡಿದ್ದೆ ಆದಲ್ಲಿ ದುರುಪಯೋಗದ ಹಣ ವಸೂಲಾತಿ ಆಗದೇ ಇರುವಂತಹ ಪರಿಸ್ಥಿತಿ ಇರುವ ಪ್ರಯುಕ್ತ ಅರ್ಜಿದಾರರ ಬ್ಯಾಂಕ್ ಘನ ನ್ಯಾಯಾಲಯದಲ್ಲಿ ಎದುರು ಅರ್ಜಿದಾರರ ಹೆಸರಿನಲ್ಲಿರುವ ಆಸ್ತಿಯನ್ನು ಆದೇಶಕ್ಕಿಂತ ಪೂರ್ವದಲ್ಲಿ ಸಹಕಾರ ಸಂಘಗಳ ಕಾಯ್ದೆ ಕಲಂ 103 ರಡಿಯಲ್ಲಿ ತೀರ್ಪು ಪೂರ್ವ ಜಪ್ತಿ ಕ್ರಮವನ್ನು ಈ ದಾವೆಯಲ್ಲಿ ನೀಡಬಹುದಾದ ಡಿಕ್ರಿಯನ್ನು ನಿರರ್ಥಕಗೊಳಿಸುವ ಉದ್ದೇಶದಿಂದ ಬೇರೆಯವರಿಗೆ ಪರಬಾರೆ: ಮಾರಾಟ ಮಾಡುವ ಕ್ರಮವನ್ನು ಪ್ರತಿಬಂಧಿಸಬೇಕೆಂದು ಕೋರಿದ್ದಾರೆ. ಈ ಕೋರಿಕೆ ಯುಕ್ತವಾಗಿದೆಯೆಂದು ಸ್ವತಃ ಈ ನ್ಯಾಯಾಲಯಕ್ಕೆ ಮನವರಿಕೆಯಾಗಿದ್ದು, ಈ ಕೆಳಕಂಡ ಷರತ್ತು ಪೂರ್ವ ಜಪ್ತು ಆಜ್ಞೆಯ ನೋಟೀಸನ್ನು ಹೊರಡಿಸಲಾಗಿದೆ.

### ಆದೇಶ

**ಕ್ರಮಾಂಕ: ಸನಿಶಿ:24:ಎಬಿಎನ್: ಕಲಂ:103:2003-04 ದಿನಾಂಕ: 12ನೇ ಮಾರ್ಚ್ 2004**

ಪ್ರಸ್ತಾವನೆಯಲ್ಲಿ ವಿವರಿಸಿರುವ ಸಂದರ್ಭಗಳ ಹಿನ್ನೆಲೆಯಲ್ಲಿ ಎ. ಎಸ್. ಜಯಪ್ಪ, ಸಹಕಾರ ಸಂಘಗಳ ಸಹಾಯಕ ನಿಬಂಧಕರು, ಶಿವಮೊಗ್ಗ ಉಪವಿಭಾಗ, ಶಿವಮೊಗ್ಗ ಆದ ನಾನು ಕರ್ನಾಟಕ ಸಹಕಾರ ಸಂಘಗಳ ಕಾಯ್ದೆ 1959ರ ಕಲಂ 103 ರನ್ವಯ ದತ್ತವಾದ ಅಧಿಕಾರವನ್ನು ಉಪಯೋಗಿಸಿ ಈ ಆದೇಶದೊಂದಿಗೆ ಇರುವ ಅನುಸೂಚಿ (ಷೆಡ್ಯೂಲ್)ಯಲ್ಲಿ ಕಾಣಿಸಿರುವ ಸ್ಥಿರಾಸ್ತಿಗಳನ್ನು ಅಧಿಭಾರ ಅರ್ಜಿಯ ತೀರ್ಪು ಪೂರ್ವದಲ್ಲಿ ಷರತ್ತು ಪೂರ್ವಕ ಜಪ್ತುಗೊಳಿಸಲಾಗಿದೆಯೆಂದು ಆದೇಶಿಸಿದೆ.

ಅಲ್ಲದೇ, ಎದುರು ಅರ್ಜಿದಾರರುಗಳು ತಮ್ಮ ಸ್ಥಿರಾಸ್ತಿಯನ್ನು ಷರತ್ತು ಪೂರ್ವ ಜಪ್ತು ಆಜ್ಞೆಯ ವ್ಯಾಪ್ತಿಯಿಂದ ಹೊರತರಲು ಇಚ್ಛಿಸಿದಲ್ಲಿ ಜಪ್ತುಗೊಳಿಸಲ್ಪಟ್ಟ ಆಸ್ತಿಯ ಮೌಲ್ಯಕ್ಕೆ ಮತ್ತು ನ್ಯಾಯಾಲಯ ಸರಿಯೆಂದು ಭಾವಿಸುವ ನಗದು ಭದ್ರತೆ (ಸೆಕ್ಯೂರಿಟಿ)ಯನ್ನು ಸಹಕಾರ ಸಂಘಗಳ ಸಹಾಯಕ ನಿಬಂಧಕರು, ಶಿವಮೊಗ್ಗ ಉಪವಿಭಾಗ, ಶಿವಮೊಗ್ಗ ಇವರ ಹೆಸರಿನಲ್ಲಿ ಶಿವಮೊಗ್ಗ ಜಿಲ್ಲಾ ಸಹಕಾರ ಕೇಂದ್ರ ಬ್ಯಾಂಕ್ (ನಿ), ಶಿವಮೊಗ್ಗ ಇಲ್ಲಿ ಅಮಾನತ್ ಖಾತೆಯಲ್ಲಿ ತೊಡಗಿಸಿ, ಈ ಬಗ್ಗೆ ರಶೀದಿ ಅಥವಾ ಬ್ಯಾಂಕಿನ ಚಲನ್ನಿನ ಪ್ರತಿಯನ್ನು ದಿನಾಂಕ: 20.3.04 ರ ಒಳಗೆ ಕೆಳಸಹಿದಾರರಿಗೆ ಹಾಜರುಪಡಿಸುವ ಮೂಲಕ ಜಪ್ತು ಆಜ್ಞೆಯಿಂದ ಹೊರಗುಳಿಯಬಹುದೆಂದು ಸಹ ಸಂಬಂಧಿಸಿದವರಿಗೆ ಈ ನೋಟೀಸ್ ನೀಡಲಾಗಿದೆ. ಭದ್ರತೆಯನ್ನು ಒದಗಿಸುವ ಮತ್ತು ಷರತ್ತು ಪೂರೈಸುವುದಕ್ಕೆ ವಿಫಲರಾದಲ್ಲಿ ಈ ಷರತ್ತು ಪೂರ್ವಕ ಜಪ್ತು ಆಜ್ಞೆಯನ್ನು ಸ್ಥಿರೀಕರಿಸಲಾಗುವುದೆಂದು ತಿಳಿಯತಕ್ಕದ್ದು.

ಈ ಆದೇಶಕ್ಕೆ ಅನುಸೂಚಿಯಲ್ಲಿರುವ ಸ್ಥಿರ ಸ್ವತ್ತುಗಳನ್ನು ಪಡೆಯುವ ಅಥವಾ ಖರೀದಿಸುವ ವ್ಯಕ್ತಿ ಅಥವಾ ಸಂಸ್ಥೆಗಳು ಸಹ ಷರತ್ತು ಪೂರ್ವಕ ಜಪ್ತು ಆಜ್ಞೆಗೆ ಒಳಪಡುವರು ಎಂದು ಸಹ ಆದೇಶಿಸಿದೆ.

ಷರತ್ತು ಪೂರ್ವಕ ಜಪ್ತು ಆದೇಶಕ್ಕೆ ಒಳಗಾದ ಸ್ವತ್ತುಗಳ ಅನುಸೂಚಿ-ಷೆಡ್ಯೂಲ್

| ಕ್ರಮ ಸಂಖ್ಯೆ | ಖಾತೆದಾರರ ಹೆಸರು | ಸ್ಥಿರಾಸ್ತಿ ಇರುವ ಸ್ಥಳ | ಖಾತೆ: ಸರ್ವೆ ನಂ. | ವಿಸ್ತೀರ್ಣ | ತರಹೆ |
|---|---|---|---|---|---|
| 1) | ಕೆ. ಹೆಚ್. ಮಲ್ಲಪ್ಪ, ಬಿನ್ ಹಾಲಪ್ಪ | ದ್ಯಾವಿನಕೆರೆ, ಕುಂಸಿ ಹೋಬಳಿ ಶಿವಮೊಗ್ಗ ತಾ: | ಸರ್ವೆ ನಂ.13 | 5.5 | ಖುಷ್ಕಿ |

ಈ ಆದೇಶವನ್ನು ನ್ಯಾಯಾಲಯದ ಮೊಹರು ಮತ್ತು ಸ್ವಸಹಿಯೊಂದಿಗೆ ದಿನಾಂಕ: 12.3.2004 ರಂದು ನೀಡಿದೆ.

ಸಹಕಾರ ಸಂಘಗಳ ಸಹಾಯಕ ನಿಬಂಧಕರು,
ಶಿವಮೊಗ್ಗ ಉಪವಿಭಾಗ, ಶಿವಮೊಗ್ಗ.

ಪಿ.ಆರ್. 443

**ಸಹಕಾರ ಸಂಘಗಳ ಉಪನಿಬಂಧಕರ ಕಛೇರಿ, ಬೆಂಗಳೂರು ಗ್ರಾಮಾಂತರ ಜಿಲ್ಲೆ, ಬೆಂಗಳೂರು**

**ವಿಷಯ :** ಸಮಾಪನೆಯಲ್ಲಿರುವ ಮರಳಕುಂಟೆ ಸಮುದಾಯ ನೀರಾವರಿ ಸಹಕಾರ ಸಂಘ ನಿ., ನೆಲಮಂಗಲ ತಾಲ್ಲೂಕು ಇದರ ನೋಂದಣಿ ರದ್ದತಿಗೊಳಿಸುವ ಬಗ್ಗೆ.

**ಉಲ್ಲೇಖ :**
1. ಈ ಕಛೇರಿಯ ಸಮಾಪನಾ ಆದೇಶ ಸಂಖ್ಯೆ: ಡಿಆರ್‌ಬಿ:ಆರ್:ಸಮಾಪನೆ:74:98-99 ದಿನಾಂಕ: 21.9.1998.
2. ಸ.ಸಂ.ಸ.ನಿ., ದೊ.ಪುರ. ರವರ ಪತ್ರ ಸಂಖ್ಯೆ: ಸನಿ:47:ಸಮಾಪನೆ: 62:2003-04 ದಿನಾಂಕ: 25.02.2004.

**ಪ್ರಸ್ತಾವನೆ:**

ಸಹಕಾರ ಸಂಘಗಳ ಸಹಾಯಕ ನಿಬಂಧಕರು, ರಾಮನಗರ ರವರು ಉಲ್ಲೇಖ (2)ರ ಪತ್ರದಲ್ಲಿ ಮರಳಕುಂಟೆ ಸಮುದಾಯ ನೀರಾವರಿ ಸಹಕಾರ ಸಂಘ ನಿ., ನೆಲಮಂಗಲ ತಾಲ್ಲೂಕು ಈ ಸಂಘದ ನೋಂದಣಿಯನ್ನು ರದ್ದುಗೊಳಿಸಲು ಶಿಫಾರಸ್ಸು ಮಾಡಿರುತ್ತಾರೆ.

ಪ್ರಸ್ತಾವನೆಯನ್ನು ಪರಿಶೀಲಿಸಲಾಗಿ ಈ ಸಂಘದ ನೋಂದಣಿ ಸಂಖ್ಯೆ ಎಆರ್47: ಆರ್‌ಜಿಎನ್: 200074:93-94 ದಿನಾಂಕ: 11.10.1983ರಲ್ಲಿ ನೋಂದಣಿಯಾಗಿದ್ದು ಈ ಸಂಘದ ಬೈಲಾ ಉದ್ದೇಶಗಳ ರೀತ್ಯಾ ಕಾರ್ಯಚಟುವಟಿಕೆ ನಡೆಸದೇ ಸ್ಥಗಿತಗೊಂಡಿದ್ದರಿಂದ ಮತ್ತು ಇದರಿಂದ ಸಂಘದ ಸದಸ್ಯರಿಗಾಗಲೀ, ಸಾರ್ವಜನಿಕರಿಗಾಗಲೀ, ಸರ್ಕಾರಕ್ಕಾಗಲೀ ಯಾವುದೇ ಪ್ರಯೋಜನವಿಲ್ಲವೆಂದು ಪರಿಗಣಿಸಿ ಉಲ್ಲೇಖ (1)ರ ಆದೇಶದಲ್ಲಿ ಸಮಾಪನೆಗೊಳಿಸಲಾಗಿತ್ತು.

ಸಂಘವು 1994-95 ರವರೆಗೆ ಆಡಿಟ್ ಆಗಿದ್ದು ಒಟ್ಟು ರೂ. 9,600 ಆಸ್ತಿ ಇದ್ದು ನಗದು ಶಿಲ್ಕು ರೂ.5.00 ಯಾರಬಳಿ ಇದೆಯೆಂದು ತಿಳಿದಿರುವುದಿಲ್ಲವೆಂದು, ಜಿಲ್ಲಾಬ್ಯಾಂಕಿನಲ್ಲಿ ಇರುವುದಿಲ್ಲವೆಂದು, ಇನ್ನೂ ಉಳಿದ ರೂ. 595-00 ನಷ್ಟು ನಷ್ಟ ಎಂದು ನಮೂದಿಸಿರುವುದು ಯಾವುದೇ ಆಸ್ತಿ ನಗದೀಕರಿಸಲು ಸಾಧ್ಯವಾಗಿಲ್ಲವೆಂದು, ಅಲ್ಲದೆ ಸಂಘದಿಂದ ಯುವಜನ ಮತ್ತು ಅಭಿವೃದ್ಧಿ ಸಂಸ್ಥೆ ಅರಿಶಿನಕುಂಟೆ ರವರಿಗೆ 2 ಕೊಳವೆ ಬಾವಿಗಳನ್ನು ನಿರ್ಮಿಸಲು ರೂ. 8000-00 ಕೊಟ್ಟಿದ್ದು ಅವರು ಯಾರೆಂದು ಪತ್ತೆಯಾಗದೇ ಸದರಿ ಮೊತ್ತವು ಬೇಬಾಕಿ ಆಗಿರುವುದಾಗಿ, ಜವಾಬ್ದಾರಿಗಳ ಪೈಕಿ ಸದಸ್ಯರಿಗೆ ರೂ. 1,050 ಷೇರು ವಾಪಸ್ಸು ನೀಡಬೇಕೆಂದು ಇದ್ದು, ಸದಸ್ಯರ ಮೂಲಧನ ರೂ. 8,450-00 ಹಾಗೂ ಆಡಿಟ್ ಫೀ ರೂ. 100-00 ಬಾಕಿ ಇದ್ದು ಯಾವುದನ್ನು ಸಹ ಹಿಂತಿರುಗಿಸಲು ಸಾಧ್ಯವಾಗಿರುವುದಿಲ್ಲವೆಂದು ಸಮಾಪನಾಧಿಕಾರಿಯವರು ತಿಳಿಸಿ ಸದರಿ ಸಂಘದಿಂದ ಸರ್ಕಾರಕ್ಕೆ ಯಾವುದೇ ಬಾಕಿ ಇಲ್ಲದೇ ಇರುವುದರಿಂದ ಸಂಘದ ನೋಂದಣಿಯನ್ನು ರದ್ದುಗೊಳಿಸುವಂತೆ ಕೋರಿರುವುದಾಗಿ ಸಹಕಾರ ಸಂಘಗಳ ಸಹಾಯಕನಿಬಂಧಕರು, ದೊಡ್ಡಬಳ್ಳಾಪುರ ರವರು ಪತ್ರದಲ್ಲಿ ತಿಳಿಸಿರುತ್ತಾರೆ.

ಈ ಸಂಘವು ಹೀಗೆಯೇ ಮುಂದುವರೆಯುವುದರಿಂದ ಸದಸ್ಯರಿಗಾಗಲೀ, ಸಾರ್ವಜನಿಕರಿಗಾಗಲೀ, ಸರ್ಕಾರಕ್ಕಾಗಲೀ ಯಾವ ಪ್ರಯೋಜನವಿಲ್ಲವೆಂದು ಪರಿಗಣಿಸಿ ಈ ಕೆಳಕಂಡಂತೆ ಆದೇಶವನ್ನು ಹೊರಡಿಸಿರುತ್ತೇನೆ.

**ಆದೇಶ**

**ನಂ:ಡಿಆರ್‌ಬಿ:ಆರ್:ಸಮಾಪನೆ:136:03-04 ದಿನಾಂಕ: 28ನೇ ಫೆಬ್ರವರಿ 2004**

ಪ್ರಸ್ತಾವನೆಯಲ್ಲಿ ವಿವರಿಸಿರುವಂತೆ ಕರ್ನಾಟಕ ಸಹಕಾರ ಸಂಘಗಳ ಕಾಯ್ದೆ ಕಲಂ 75 ರನ್ವಯ ಹಾಗೂ ಸರ್ಕಾರದ ಅಧಿಸೂಚನೆ ಸಂಖ್ಯೆ ಸಿಎಂಡಬ್ಲ್ಯೂ:69:ಸಿಎಲ್‌ಎಂ: 2001 ದಿನಾಂಕ: 21.11.2001 ರಂತೆ ನನಗೆ ದತ್ತವಾಗಿರುವ ಅಧಿಕಾರವನ್ನು ಉಪಯೋಗಿಸಿ ಭೀಮಸೇನ ಬಂಕದ, ಸಹಕಾರ ಸಂಘಗಳ ಉಪನಿಬಂಧಕರು ಬೆಂಗಳೂರು ಗ್ರಾಮಾಂತರ ಜಿಲ್ಲೆ, ಬೆಂಗಳೂರು ಆದ ನಾನು ಮರಳಕುಂಟೆ ಸಮುದಾಯ ನೀರಾವರಿ ಸಹಕಾರ ಸಂಘ ನಿ., ನೆಲಮಂಗಲ ತಾಲ್ಲೂಕು ಈ ಸಹಕಾರ ಸಂಘದ ನೋಂದಣಿಯನ್ನು ರದ್ದುಗೊಳಿಸಿ ಆದೇಶ ಹೊರಡಿಸಿರುತ್ತೇನೆ.

ಈ ಆದೇಶವನ್ನು ನನ್ನ ಸ್ವಸಹಿ ಹಾಗೂ ಕಛೇರಿಯ ಮುದ್ರೆಯೊಂದಿಗೆ ದಿನಾಂಕ: 28.2.2004 ರಂದು ಹೊರಡಿಸಿರುತ್ತೇನೆ.

ಸಹಕಾರ ಸಂಘಗಳ ಉಪನಿಬಂಧಕರು,
ಬೆಂಗಳೂರು ಗ್ರಾಮಾಂತರ ಜಿಲ್ಲೆ, ಬೆಂಗಳೂರು.

ಪಿ.ಆರ್. 444

**ಸಹಕಾರ ಸಂಘಗಳ ಉಪನಿಬಂಧಕರು ತುಮಕೂರು ಜಿಲ್ಲೆ, ತುಮಕೂರು ಇವರ ಕಾರ್ಯಾಲಯದ ನಡವಳಿಗಳು.**

**ನಂ: ಡಿಆರ್‌ಟಿ:ಎಲ್‌ಕ್ಯೂಡಿ:168:ಡಿಎಲ್‌ಎಸ್:ಸಿಆರ್-81:2000-01 ದಿನಾಂಕ: 8ನೇ ಮಾರ್ಚ್ 2004**

**ವಿಷಯ :** ಗಂಗಾ ಹರಿಜನ:ಗಿರಿಜನ ಮಹಿಳಾ ವಿವಿಧೋದ್ದೇಶ ಸಹಕಾರ ಸಂಘ ನಿ ಚಿಕ್ಕಮಾಲೂರು, ಮಧುಗಿರಿ ತಾ: ಇದರ ನೋಂದಣಿ ರದ್ದತಿ ಬಗ್ಗೆ.

**ಉಲ್ಲೇಖ :**
1. ಸಹಕಾರ ಸಂಘಗಳ ಸಹಾಯಕ ನಿಬಂಧಕರು, ಮಧುಗಿರಿ ಉಪವಿಭಾಗ, ಮಧುಗಿರಿ ಇವರ ಪತ್ರ ಸಂಖ್ಯೆ ಸನಿ-33:ಎಂಕೆಟಿ:ಎಲ್‌ಕ್ಯೂಡಿ:2000-01 ದಿನಾಂಕ: 8.9.2000.
2. ಈ ಕಛೇರಿ ನೋಟೀಸ್ ಸಂಖ್ಯೆ: ಡಿಆರ್‌ಟಿ:ಎಲ್‌ಕ್ಯೂಡಿ:162:ಡಿಎಲ್‌ಎಸ್:ಸಿಆರ್-81: ದಿನಾಂಕ:30.9.2000
3. ಸಮಾಪನೆ ಆದೇಶ ಡಿಆರ್‌ಟಿ:ಎಲ್‌ಕ್ಯೂಡಿ:162:ಡಿಎಲ್‌ಎಸ್:ಸಿಆರ್-81, ದಿನಾಂಕ: 31.12.2000
4. ಸಹಕಾರ ಸಂಘಗಳ ಸಹಾಯಕ ನಿಬಂಧಕರು, ಮಧುಗಿರಿ ಇವರ ಪತ್ರ ಸಂಖ್ಯೆ:ಸನಿ-33:ಎಂಕೆಟಿ:ಎಲ್‌ಕ್ಯೂಡಿ: 2001-02 ದಿನಾಂಕ: 24.1.2002
5. ಈ ಕಛೇರಿ ಸಮಾಪನಾಧಿಕಾರಿಯನ್ನು ಬದಲಿಸಿ ನೀಡಿರುವ ಆದೇಶ ಪತ್ರ ಸಂಖ್ಯೆ: ಡಿಆರ್‌ಟಿ:ಎಲ್‌ಕ್ಯೂಡಿ:162: ಡಿಎಲ್‌ಎಸ್:ಸಿಆರ್-81:2000-01 ದಿನಾಂಕ:26.4.2002.

6. ಸಮಾಪನಾಧಿಕಾರಿ, ಗಂಗಾ ಹರಿಜನ:ಗಿರಿಜನ ಮಹಿಳಾ ವಿವಿಧೋದ್ದೇಶ ಸಹಕಾರ ಸಂಘ ನಿ., ಚಿಕ್ಕಮಾಲೂರು ಹಾಗೂ ಮಾರಾಟಾಧಿಕಾರಿ ಸಹಕಾರ ಸಂಘಗಳ ಸಹಾಯಕ ನಿಬಂಧಕರವರ ಕಛೇರಿ, ಮಧುಗಿರಿ ಇವರ ಪತ್ರ ಸಂಖ್ಯೆ: ಸನಿ-33:ಮಾ.ಅ. ಸಮಾಪನೆ:2003-04 ದಿನಾಂಕ: 4.3.2004.

**ಪ್ರಸ್ತಾವನೆ:**

ಗಂಗಾ ಹರಿಜನ:ಗಿರಿಜನ ಮಹಿಳಾ ವಿವಿಧೋದ್ದೇಶ ಸಹಕಾರ ಸಂಘ ನಿ ಚಿಕ್ಕಮಾಲೂರು, ಮಧುಗಿರಿ ತಾಲ್ಲೂಕು ಈ ಸಂಘವು ನೋಂದಣಿ ಸಂಖ್ಯೆ ಸನಿ-33:ಎಓಬಿ:ಆರ್‌ಸಿಎಸ್: 19384:95-96 ದಿನಾಂಕ: 9.11.95 ಆಗಿದ್ದು ಸದರಿ ಸಂಘದ ಕಾರ್ಯಚಟುವಟಿಕೆ ನಡೆಸದೆ ಸ್ಥಗಿತಗೊಂಡಿದ್ದುದರ ಮೇರೆಗೆ ಸಹಾಯಕ ನಿಬಂಧಕರು, ಮಧುಗಿರಿ ಇವರು ಉಲ್ಲೇಖ (1) ರ ತಮ್ಮ ಪತ್ರ ದಿನಾಂಕ: 8.9.2000 ರಲ್ಲಿ ಸಮಾಪನೆಗೊಳಿಸಲು ಪ್ರಸ್ತಾವನೆ ಸಲ್ಲಿಸಿದ್ದರು. ಸಂಘದಲ್ಲಿ ಕರ್ನಾಟಕ ಸಹಕಾರ ಸಂಘಗಳ ಕಾಯಿದೆ 1959ರ ಕಲಂ 28(ಎ)(5)ರ ಮೇರೆಗೆ ಆಡಳಿತಾಧಿಕಾರಿ ಕಾರ್ಯನಿರ್ವಹಿಸುತ್ತಿದ್ದು ಸಂಘದ ಸದಸ್ಯರಿಗೆ ಸಂಘದ ವ್ಯವಹಾರದ ಬಗ್ಗೆ ಆಸಕ್ತಿ ಇಲ್ಲದೆ ಇದ್ದುದರಿಂದ ಉಲ್ಲೇಖ(3)ರ ಆದೇಶದಲ್ಲಿ ಸಂಘವನ್ನು ಸಮಾಪನೆಗೊಳಿಸಿ, ಸಂಘಕ್ಕೆ ಸಮಾಪನಾಧಿಕಾರಿಯನ್ನು ನೇಮಿಸಿ, ಸಂಘದ ಆಸ್ತಿ ಜವಾಬ್ದಾರಿಗಳನ್ನು ವಿಲೇವಾರಿ ಮಾಡಿ ಆಸ್ತಿ ಜವಾಬ್ದಾರಿ ತಃಖ್ತೆಯನ್ನು ಶೂನ್ಯಗೊಳಿಸಿ ಸಂಘದ ನೋಂದಣಿ ರದ್ದತಿಗೆ ಪ್ರಸ್ತಾವೆ ಸಲ್ಲಿಸಲು ಆದೇಶಿಸಲಾಗಿತ್ತು ಉಲ್ಲೇಖ(4)ರಲ್ಲಿ ಸಹಕಾರ ಸಂಘಗಳ ಸಹಾಯಕ ನಿಬಂಧಕರು, ಮಧುಗಿರಿ ಇವರು ಸಮಾಪನಾಧಿಕಾರಿಯನ್ನು ಬದಲಿಸಿ ಆದೇಶವನ್ನು ನೀಡಬೇಕೆಂದು ಕೋರಿರುತ್ತಾರೆ. ಪ್ರಯುಕ್ತ ಉಲ್ಲೇಖ (5) ರಲ್ಲಿ ಈ ಕಛೇರಿಯಿಂದ ಸಮಾಪನಾಧಿಕಾರಿಯನ್ನು ಬದಲಾಯಿಸಿ ಆದೇಶವನ್ನು ಹೊರಡಿಸಿ ಸಂಘದ ನೋಂದಣಿ ರದ್ದತಿಗೆ ಪ್ರಸ್ತಾವೆ ಸಲ್ಲಿಸಲು ಸೂಚಿಸಲಾಗಿತ್ತು ಅದರಂತೆ ನೋಂದಣಿ ರದ್ದತಿಗೆ ಪ್ರಸ್ತಾವೆಯನ್ನು ಉಲ್ಲೇಖ(6)ರ ಮೇರೆಗೆ ಸಮಾಪನಾಧಿಕಾರಿ ಹಾಗೂ ಮಾರಾಟಾಧಿಕಾರಿ, ಸಹಕಾರ ಸಂಘಗಳ ಸಹಾಯಕ ನಿಬಂಧಕರ ಕಛೇರಿ, ಮಧುಗಿರಿ ಇವರು ಸಲ್ಲಿಸಿರುತ್ತಾರೆ. ಪ್ರಯುಕ್ತ ಈ ಕೆಳಕಂಡ ಆದೇಶ ಹೊರಡಿಸಿದೆ.

**ಆದೇಶ**

ಪ್ರಸ್ತಾವನೆಯಲ್ಲಿ ವಿವರಿಸಿರುವಂತೆ ಗಂಗಾ ಹರಿಜನ:ಗಿರಿಜನ ಮಹಿಳಾ ವಿವಿಧೋದ್ದೇಶ ಸಹಕಾರ ಸಂಘ ನಿ., ಚಿಕ್ಕಮಾಲೂರು, ಮಧುಗಿರಿ ತಾಲ್ಲೂಕು, ಇದರ ನೋಂದಣಿ ಸಂಖ್ಯೆ: ಸನಿ-33:ಎಓಬಿ:ಆರ್‌ಸಿಎಸ್:19384:95-96, ದಿನಾಂಕ: 9.11.1995 ಇದನ್ನು ಮೊಹಮದ್ ಸಲೀಂ, ಸಹಕಾರ ಸಂಘಗಳ ಉಪನಿಬಂಧಕರು, ತುಮಕೂರು ಜಿಲ್ಲೆ, ತುಮಕೂರು ಆದ ನಾನು ಕರ್ನಾಟಕ ಸಹಕಾರಿ ಕಾಯ್ದೆ 1959 ರ ಕಲಂ 75ರ ಅನ್ವಯ ಹಾಗೂ ಸರ್ಕಾರದ ಅಧಿಸೂಚನೆ ಸಂಖ್ಯೆ ಸಿಎಂಡಬ್ಲ್ಯೂ:69:ಸಿಎಲ್‌ಎಂ: 2001: ದಿನಾಂಕ: 21.11.2001ರ ಮೇರೆಗೆ ದತ್ತವಾಗಿರುವ ಅಧಿಕಾರವನ್ನು ಚಲಾಯಿಸಿ ಮೇಲ್ಕಂಡ ಸಂಘದ ನೋಂದಣಿಯನ್ನು ರದ್ದುಪಡಿಸಿರುತ್ತೇನೆ. ತತ್ಪರಿಣಾಮವಾಗಿ ಸಂಘವು ವಿಸರ್ಜನೆಗೊಂಡಿರುತ್ತದೆಂದು ಆದೇಶಿಸಿರುತ್ತೇನೆ.

ಈ ಆದೇಶವನ್ನು ದಿನಾಂಕ: 8.3.2004 ರಂದು ನನ್ನ ಹಸ್ತಾಕ್ಷರ ಮತ್ತು ಕಛೇರಿ ಮುದ್ರೆಯೊಂದಿಗೆ ನೀಡಿರುತ್ತೇನೆ.

**ಮೊಹಮದ್ ಸಲೀಂ**

ಪಿ.ಆರ್. 445 ಸಹಕಾರ ಸಂಘಗಳ ಉಪನಿಬಂಧಕರು, ತುಮಕೂರು ಜಿಲ್ಲೆ, ತುಮಕೂರು.

**ಸಹಕಾರ ಸಂಘಗಳ ಉಪನಿಬಂಧಕರು, ತುಮಕೂರು ಜಿಲ್ಲೆ, ತುಮಕೂರು ಇವರ ಕಾರ್ಯಾಲಯದ ನಡವಳಿಗಳು.**

**ನಂ: ಡಿಆರ್‌ಟಿ:ಎಲ್‌ಕ್ಯೂಡಿ:275:96-97 ದಿನಾಂಕ: 28ನೇ ಫೆಬ್ರವರಿ 2004**

**ವಿಷಯ :** ಕಾಟೇಜ್ ಕೈಗಾರಿಕಾ ಸಹಕಾರ ಸಂಘ ನಿಯಮಿತ, ತುಮಕೂರು ಇದರ ನೋಂದಣಿ ರದ್ದತಿ ಬಗ್ಗೆ.

**ಉಲ್ಲೇಖ :**
1. ಸಹಕಾರ ಸಂಘಗಳ ಸಹಾಯಕ ನಿಬಂಧಕರು, ತುಮಕೂರು ಉಪವಿಭಾಗ ತುಮಕೂರು ಇವರ ಪತ್ರ ಸಂ. ಎಆರ್‌ಟಿ:32:ಎಲ್‌ಕ್ಯೂಡಿ:93-94 ದಿನಾಂಕ: 23.2.94
2. ಈ ಕಛೇರಿ ನೋಟೀಸ್ ಸಂಖ್ಯೆ: ಡಿಆರ್‌ಟಿ:ಎಲ್‌ಕ್ಯೂಡಿ:118:93-94 ದಿನಾಂಕ: 31.3.1994.
3. ಸಮಾಪನೆ ಆದೇಶ ಡಿಆರ್‌ಟಿ:ಎಲ್‌ಕ್ಯೂಡಿ:275:96-97 ದಿನಾಂಕ: 30.12.1996
4. ಸಹಕಾರ ಸಂಘಗಳ ಸಹಾಯಕ ನಿಬಂಧಕರು, ತುಮಕೂರು ಇವರ ಪತ್ರ ಸಂಖ್ಯೆ: ಸನಿತು-32:ಡಿಎಲ್‌ಎಸ್: 96:2002-03 ದಿನಾಂಕ: 28.2.2004.

**ಪ್ರಸ್ತಾವನೆ:**

ಕಾಟೇಜ್ ಕೈಗಾರಿಕಾ ಸಹಕಾರ ಸಂಘ ನಿಯಮಿತ, ತುಮಕೂರು, ತುಮಕೂರು ತಾ: ಈ ಸಂಘವು ನೋಂದಣಿ ಸಂಖ್ಯೆ ಎಆರ್‌ಟಿ: 781:83-84 ದಿನಾಂಕ: 25.8.1984 ಆಗಿದ್ದು ಸದರಿ ಸಂಘದ ಕಾರ್ಯಚಟುವಟಿಕೆ ನಡೆಸದೆ ಸ್ಥಗಿತಗೊಂಡಿದ್ದುದರ ಮೇರೆಗೆ ಸಹಾಯಕ ನಿಬಂಧಕರು, ತುಮಕೂರು ಇವರು ಉಲ್ಲೇಖ (1)ರ ತಮ್ಮ ಪತ್ರ ದಿನಾಂಕ: 23.2.94ರಲ್ಲಿ ಸಮಾಪನೆಗೊಳಿಸಲು ಪ್ರಸ್ತಾವನೆ ಸಲ್ಲಿಸಿದ್ದರು. ಈ ಕಛೇರಿಯ ಉಲ್ಲೇಖ (2)ರ ಮೇರೆಗೆ ಸಂಘದ ಆಡಳಿತ ಮಂಡಳಿ ಸದಸ್ಯರಿಗೆ ನೋಟೀಸ್ ನೀಡಿ ಆಕ್ಷೇಪಣೆ ಸಲ್ಲಿಸಲು ಕಾಲಾವಕಾಶ ನೀಡಲಾಗಿತ್ತು. ತತ್ಸಂಬಂಧವಾಗಿ ಯಾವುದೇ ಸಮಜಾಯಿಸಿಯಾಗಲೀ ತಕರಾರುಗಳು ಆಕ್ಷೇಪಣೆ ಬಾರದಿದ್ದುದರಿಂದ ಉಲ್ಲೇಖ (3)ರ ಆದೇಶದಲ್ಲಿ ಸಂಘವನ್ನು ಸಮಾಪನೆಗೊಳಿಸಿ, ಸಂಘಕ್ಕೆ ಸಮಾಪನಾಧಿಕಾರಿಯನ್ನು ನೇಮಿಸಿ, ಸಂಘದ ಆಸ್ತಿ ಜವಾಬ್ದಾರಿಗಳನ್ನು ವಿಲೇವಾರಿ ಮಾಡಿ ಸಂಘದ ನೋಂದಣಿ ರದ್ದತಿಗೆ ಪ್ರಸ್ತಾವೆ ಸಲ್ಲಿಸಲು ಆದೇಶಿಸಲಾಗಿತ್ತು. ಸಂಘವು ಒಂದು ನಿವೇಶನವನ್ನು ಹೊಂದಿದ್ದು ಸದರಿ ನಿವೇಶನವನ್ನು ಖಾದಿ ಗ್ರಾಮೋದ್ಯೋಗ ಮಂಡಳಿಯ ಸಾಲಕ್ಕೆ ದಿನಾಂಕ: 28.4.80 ರಲ್ಲಿ ತುಮಕೂರು ತಾಲ್ಲೂಕಿನ ತಹಸೀಲ್ದಾರ್‌ರವರು ಬಹಿರಂಗ ಹರಾಜು ಮೂಲಕ ಮಾರಾಟ ಮಾಡಿ ಬಂದಂತಹ ಹಣದಲ್ಲಿ ಖಾದಿ ಗ್ರಾಮೋದ್ಯೋಗ ಆಯೋಗದ ಸಾಲ ರೂ. 35,169-00 ಹಾಗೂ ಅದಕ್ಕೆ ತಗಲುವ ಬಡ್ಡಿ ಸೇರಿಸಿ ಒಟ್ಟು ರೂ. 39,191-00 ಗಳಿಗೆ ಡಿ.ಡಿ.ಯನ್ನು ದಿನಾಂಕ: 18.8.1980 ರಲ್ಲಿ ಸಿ.ಇ.ಓ ಖಾದಿ ಗ್ರಾಮೋದ್ಯೋಗ ಆಯೋಗ ಮುಂಬಯಿ ಇವರಿಗೆ ಕಳುಹಿಸಿರುತ್ತಾರೆ. ಹಾಗೂ ಸಂಘದ ನೋಂದಣಿ

ರದ್ದತಿ ಬಗ್ಗೆ ದಿನಾಂಕ: 15.3.2001 ರಲ್ಲಿ ಆಸ್ತಿ ಜವಾಬ್ದಾರಿಗಳಿಗೆ ನಿರ್ದಿಷ್ಟ ಹಾಗೂ ನಿಖರವಾದ ದಾಖಲಾತಿಗಳು, ಆಧಾರಗಳು ಲಭ್ಯವಿರುವುದಿಲ್ಲವೆಂದು, ಈ ಬಗ್ಗೆ ನೋಂದಣಿ ರದ್ದತಿಗೆ ನೇರವಾಗಿ ಪ್ರಸ್ತಾವನೆ ಸಲ್ಲಿಸಲಾಗುವುದೆಂದು ಸ್ಥಳೀಯ ಪತ್ರಿಕೆ ಏಕೇಶ್ ಪತ್ರಿಕೆಯಲ್ಲಿ ಪ್ರಕಟಣೆ ಹೊರಡಿಸಿದ್ದು ಸಂಘದ ನೋಂದಣಿ ರದ್ದತಿ ಬಗ್ಗೆ ಯಾರಿಂದಲೂ ಆಕ್ಷೇಪಣೆ ಬಂದಿರುವುದಿಲ್ಲ. ಪ್ರಯುಕ್ತ ನೋಂದಣಿ ರದ್ದತಿಗೆ ಉಲ್ಲೇಖ(4) ರಲ್ಲಿ ಸಹಕಾರ ಸಂಘಗಳ ಸಹಾಯಕ ನಿಬಂಧಕರು ತುಮಕೂರು ಇವರು ಪ್ರಸ್ತಾವೆ ಸಲ್ಲಿಸಿರುತ್ತಾರೆ. ಆದ್ದರಿಂದ ಈ ಕೆಳಕಂಡ ಆದೇಶವನ್ನು ಹೊರಡಿಸಲಾಗಿದೆ.

**ಆದೇಶ**

ಪ್ರಸ್ತಾವನೆಯಲ್ಲಿ ವಿವರಿಸಿರುವಂತೆ ಕಾಟೇಜ್ ಕೈಗಾರಿಕಾ ಸಹಕಾರ ಸಂಘ ನಿಯಮಿತ, ತುಮಕೂರು ತುಮಕೂರು ತಾ: ಈ ಸಂಘವು ನೋಂದಣಿ ಸಂಖ್ಯೆ: ಎಆರ್‌ಟಿ: 781:83-84 ದಿನಾಂಕ: 25.8.1984 ಇದನ್ನು ಮೊಹಮದ್ ಸಲೀಂ, ಸಹಕಾರ ಸಂಘಗಳ ಉಪನಿಬಂಧಕರು, ತುಮಕೂರು ಜಿಲ್ಲೆ, ತುಮಕೂರು ಆದ ನಾನು ಕರ್ನಾಟಕ ಸಹಕಾರಿ ಕಾಯ್ದೆ 1959ರ ಕಲಂ 75 ರ ಅನ್ವಯ ಹಾಗೂ ಸರ್ಕಾರದ ಅಧಿಸೂಚನೆ ಸಂಖ್ಯೆ ಸಿಎಂಡಬ್ಲ್ಯೂ:69:ಸಿಎಲ್‌ಎಂ:2001: ದಿನಾಂಕ: 21.11.2001ರ ಮೇರೆಗೆ ದತ್ತವಾಗಿರುವ ಅಧಿಕಾರವನ್ನು ಚಲಾಯಿಸಿ ಮೇಲ್ಕಂಡ ಸಂಘದ ನೋಂದಣಿಯನ್ನು ರದ್ದುಪಡಿಸಿರುತ್ತೇನೆ. ತತ್ಪರಿಣಾಮವಾಗಿ ಸಂಘವು ವಿಸರ್ಜನೆಗೊಂಡಿರುತ್ತದೆಂದು ಆದೇಶಿಸಿರುತ್ತೇನೆ.

ಈ ಆದೇಶವನ್ನು ದಿನಾಂಕ: 28.2.2004 ರಂದು ನನ್ನ ಹಸ್ತಾಕ್ಷರ ಮತ್ತು ಕಛೇರಿ ಮುದ್ರೆಯೊಂದಿಗೆ ನೀಡಿರುತ್ತೇನೆ.

**ಮೊಹಮದ್ ಸಲೀಂ**

ಪಿ.ಆರ್. 446 ಸಹಕಾರ ಸಂಘಗಳ ಉಪನಿಬಂಧಕರು, ತುಮಕೂರು ಜಿಲ್ಲೆ, ತುಮಕೂರು.

**ಸಹಕಾರ ಸಂಘಗಳ ಉಪನಿಬಂಧಕರು, ತುಮಕೂರು ಜಿಲ್ಲೆ, ತುಮಕೂರು ಇವರ ಕಾರ್ಯವಾಹಿಗಳು**

**ವಿಷಯ :** ವ್ಯವಸಾಯ ಸೇವಾ ಸಹಕಾರ ಬ್ಯಾಂಕ್ ನಿ., ನಾಗಸಂದ್ರ, ಕುಣಿಗಲ್ ತಾ: ಇದನ್ನು ಪುನಶ್ಚೇತನಗೊಳಿಸುವ ಬಗ್ಗೆ.

**ಉಲ್ಲೇಖ :**
1. ಈ ಕಛೇರಿ ಸಮಾಪನಾ ಆದೇಶ ಸಂ. ಡಿಆರ್‌ಟಿ:ಡಿಎಲ್‌ಎಸ್:739: ಎಲ್‌ಕ್ಯೂಡಿ:59:2001-02 ದಿನಾಂಕ:1.5.2002
2. ನಾಗಸಂದ್ರ ಮತ್ತು ಸುತ್ತ ಮುತ್ತಲ ಗ್ರಾಮಗಳ ರೈತರ ಮನವಿ ದಿನಾಂಕ: 22.12.2003 ರ ಪತ್ರ.
3. ಸಂ. ಡಿಆರ್‌ಟಿ:ಡಿಎಲ್‌ಎಸ್: 39:ಎಲ್‌ಕ್ಯೂಡಿ:59:2001-02 ದಿನಾಂಕ: 29.12.2003.
4. ಸಹಕಾರ ಸಂಘಗಳ ಸಹಾಯಕ ನಿಬಂಧಕರು, ತುಮಕೂರು ಉಪವಿಭಾಗ, ತುಮಕೂರು ಇವರ ಪತ್ರ ಸಂ. ಸನಿ-32: ಡಿಎಲ್‌ಎಸ್:126:2003-04 ದಿನಾಂಕ: 28.3.2004

**ಪ್ರಸ್ತಾವನೆ:**

ತುಮಕೂರು ಜಿಲ್ಲೆ, ಕುಣಿಗಲ್ ತಾಲ್ಲೂಕಿನ ವ್ಯವಸಾಯ ಸೇವಾ ಸಹಕಾರ ಬ್ಯಾಂಕ್ ನಿ., ನಾಗಸಂದ್ರ ಈ ಸಂಘವು ಕಾರ್ಯನಿರ್ವಹಿಸದೇ ಸ್ಥಗಿತಗೊಂಡಿದ್ದರಿಂದ ಉಲ್ಲೇಖ (1)ರ ರೀತ್ಯಾ ಈ ಕಛೇರಿಯ ಆದೇಶದ ಮೇರೆಗೆ ಸಂಘವನ್ನು ಸಮಾಪನೆಗೊಳಿಸಲಾಗಿತ್ತು. ಉಲ್ಲೇಖ (2)ರಲ್ಲಿ ಸಂಘದ ಕಾರ್ಯವ್ಯಾಪ್ತಿಯ ರೈತರುಗಳು ಸಂಘವನ್ನು ಪುನಃ ಶ್ಚೇತನಗೊಳಿಸುವಂತೆ ಕಛೇರಿಗೆ ಮನವಿ ಸಲ್ಲಿಸಿದ್ದು ಉಲ್ಲೇಖ(3)ರ ಪತ್ರದಲ್ಲಿ ಈ ಬಗ್ಗೆ ಸಹಕಾರ ಸಂಘಗಳ ಸಹಾಯಕ ನಿಬಂಧಕರು, ತುಮಕೂರು ಇವರನ್ನು ಸದರಿ ಸಂಘದ ಪುನಃಶ್ಚೇತನದ ಬಗ್ಗೆ ಅಭಿಪ್ರಾಯವನ್ನು ಕೋರಲಾಗಿತ್ತು. ಉಲ್ಲೇಖ (4)ರ ಪತ್ರದಲ್ಲಿ ಸಹಕಾರ ಸಂಘಗಳ ಸಹಾಯಕ ನಿಬಂಧಕರು, ತುಮಕೂರು ಇವರು ತಿಳಿಸಿರುವಂತೆ ಸಹಕಾರ ಅಭಿವೃದ್ಧಿ ಅಧಿಕಾರಿ ಕುಣಿಗಲ್ ಮತ್ತು ಮೇಲ್ವಿಚಾರಕರು, ಡಿ.ಸಿ.ಸಿ. ಬ್ಯಾಂಕ್ ನಿ., ಕುಣಿಗಲ್ ಇವರು ಒಟ್ಟಿಗೆ ಸ್ಥಳ ಪರಿಶೀಲನೆ ಮಾಡಿ ಸಂಘವು ಉತ್ತಮವಾಗಿ ಕಾರ್ಯನಿರ್ವಹಿಸುತ್ತಿದ್ದು. ಈಗ ಪೂರ್ಣಾವಧಿ ಕಾರ್ಯದರ್ಶಿಯಿಲ್ಲದೇ ಕೆಲಸ ಕಾರ್ಯಗಳು ನಡೆಯದೆ ಸ್ಥಗಿತಗೊಳ್ಳಲು ಅತಿ ಮುಖ್ಯ ಕಾರಣವೆಂದು ಹಾಗೂ ಯಡಿಯೂರು ಹೋಬಳಿಯ ಶೇ. 70 ರಷ್ಟು ಜನಸಂಖ್ಯೆ ಈ ಸಂಘದ ವ್ಯಾಪ್ತಿಗೆ ಬರುವುದರಿಂದ ಈ ಭಾಗದ ರೈತಾಪಿ ಜನರಿಗೆ ಅನಾನುಕೂಲವಾಗಿರುವುದರಿಂದ ಸಂಘವನ್ನು ಪುನಃಶ್ಚೇತನಗೊಳಿಸಬೇಕೆಂದು ಅಭಿಪ್ರಾಯ ವ್ಯಕ್ತಪಡಿಸಿರುತ್ತಾರೆ. ಪ್ರಯುಕ್ತ ಕೆಳಕಂಡ ಆದೇಶವನ್ನು ಹೊರಡಿಸಿದೆ.

**ಆದೇಶ**

**ಸಂಖ್ಯೆ:ಡಿಆರ್‌ಟಿ:ಡಿಎಲ್‌ಎಸ್: 739:ಎಲ್‌ಕ್ಯೂಡಿ:59:2001-02 ದಿನಾಂಕ: 10ನೇ ಮಾರ್ಚ್ 2004**

ಪ್ರಸ್ತಾವನೆಯಲ್ಲಿ ವಿವರಿಸಿರುವ ಅಂಶಗಳನ್ನು ಗಮನಿಸಿ ಕರ್ನಾಟಕ ಸಹಕಾರ ಸಂಘಗಳ ಕಾಯಿದೆ 1959ರ ಕಲಂ 72(3) ಹಾಗೂ ಸರ್ಕಾರದ ಅಧಿಸೂಚನೆ ಸಂಖ್ಯೆ: ಸಿಎಂಡಬ್ಲ್ಯೂ:69:ಸಿಎಲ್‌ಎಂ: 2001 ದಿನಾಂಕ: 21.11.2001ರ ಮೇರೆಗೆ ದತ್ತವಾಗಿರುವ ಅಧಿಕಾರವನ್ನು ಚಲಾಯಿಸಿ ಮೊಹಮದ್ ಸಲೀಂ, ಸಹಕಾರ ಸಂಘಗಳ ಉಪನಿಬಂಧಕರು, ತುಮಕೂರು ಜಿಲ್ಲೆ, ತುಮಕೂರು ಆದ ನಾನು ವ್ಯವಸಾಯ ಸೇವಾ ಸಹಕಾರ ಬ್ಯಾಂಕ್ ನಿ., ನಾಗಸಂದ್ರ, ಕುಣಿಗಲ್ ತಾ: ಈ ಸಂಘವನ್ನು ಸಂಘದ ಸದಸ್ಯರ ಮತ್ತು ರೈತಾಪಿ ವರ್ಗದ ಜನರ ಹಾಗೂ ಸಾರ್ವಜನಿಕರ ಹಿತದೃಷ್ಟಿಯಿಂದ ಈ ಸಂಘವು ತನ್ನ ಕಾರ್ಯಚಟುವಟಿಕೆಗಳನ್ನು ಪುನರಾರಂಭಿಸಿ ಉತ್ತಮವಾಗಿ ಕಾರ್ಯನಿರ್ವಹಿಸುವಂತೆ ಅಗತ್ಯ ಕ್ರಮಗಳನ್ನು ಕೈಗೊಳ್ಳಲು ತಿಳಿಸಿ ಉಲ್ಲೇಖ (1)ರ ಸಮಾಪನಾ ಆದೇಶ ರದ್ದುಪಡಿಸಿ ಸಂಘವನ್ನು ಪುನಶ್ಚೇತನಗೊಳಿಸಿ ಆದೇಶಿಸಿರುತ್ತೇನೆ.

ಈ ಆದೇಶವನ್ನು ದಿನಾಂಕ: 10.3.2004 ರಂದು ನನ್ನ ಹಸ್ತಾಕ್ಷರ ಮತ್ತು ಕಛೇರಿಯ ಮುದ್ರೆಯೊಂದಿಗೆ ನೀಡಿರುತ್ತೇನೆ.

**ಮೊಹಮದ್ ಸಲೀಂ**

ಪಿ.ಆರ್. 447 ಸಹಕಾರ ಸಂಘಗಳ ಉಪನಿಬಂಧಕರು, ತುಮಕೂರು ಜಿಲ್ಲೆ, ತುಮಕೂರು.

## ಸಹಕಾರ ಇಲಾಖೆ

**ಸಹಕಾರ ಸಂಘಗಳ ಅಪರ ನಿಬಂಧಕರು (ಕೈಗಾರಿಕೆ ಮತ್ತು ಇತರೆ) ಸಹಕಾರ ಸಂಘಗಳ ನಿಬಂಧಕರ ಕಛೇರಿ, ಕರ್ನಾಟಕ ರಾಜ್ಯ, ನಂ.1, ಅಲಿ ಆಸ್ಕರ್ ರಸ್ತೆ, ಬೆಂಗಳೂರು-82 ಇವರ ನಡವಳಿಗಳು.**

**ಕ್ರಮಾಂಕ:ಆರ್‌ಸಿಎಸ್:ಎಲ್‌ಕ್ಯೂಡಿ:59:2000-01 ದಿನಾಂಕ: 21ನೇ ಫೆಬ್ರವರಿ 2004**

**ವಿಷಯ :** ಇಂಡಸ್ಟ್ರಿಯಲ್ ಟೌನ್‌ಷಿಪ್ ಕೋ ಆಪರೇಟಿವ್ ಸೊಸೈಟಿ ನಿ., ಬೆಂಗಳೂರು ಇದನ್ನು ಸಮಾಪನೆಗೊಳಿಸುವ ಬಗ್ಗೆ.

**ಉಲ್ಲೇಖ :**
1. ಸಹಕಾರ ಸಂಘಗಳ ಜಂಟಿ ನಿಬಂಧಕರು, ಬೆಂಗಳೂರು ವಿಭಾಗ, ಬೆಂಗಳೂರು ಇವರ ಪತ್ರ ಸಂ: ಜೆಆರ್‌ಬಿ: ಆರ್‌ಬಿಎನ್: 140:2000-01 ದಿನಾಂಕ: 28.3.2001
2. ಈ ಕಛೇರಿಯ ಇದೇ ಕ್ರಮಾಂಕದ ಪತ್ರ ದಿನಾಂಕ: 12.4.2001, 23.8.2001 ಮತ್ತು 17.11.2001 ರಲ್ಲಿ ಸರ್ಕಾರಕ್ಕೆ ಬರೆದ ಪತ್ರಗಳು.
3. ಸಂಘದ ಪ್ರವರ್ತಕರಿಗೆ ಇದೇ ಕ್ರಮಾಂಕದ ಪತ್ರ ದಿನಾಂಕ: 3.9.2001 ಹಾಗೂ 27.12.2001.
4. ಮುಖ್ಯ ಪ್ರವರ್ತಕರು, ಇಂಡಸ್ಟ್ರಿಯಲ್ ಟೌನ್‌ಷಿಪ್ ಕೋ-ಆಪರೇಟಿವ್ ಸೊಸೈಟಿ ಲಿ., ಬೆಂಗಳೂರು ರವರ ಪತ್ರ ದಿನಾಂಕ: 29.3.2001 ಹಾಗೂ 16.8.2001.
5. ಸರ್ಕಾರದ ಅಧಿಸೂಚನೆ ಸಂ: ಸಮಾತೂ:20:ಸಿಡಿಆರ್:01 ದಿನಾಂಕ: 30.11.2001.
6. ಸಹಕಾರ ಸಂಘಗಳ ಜಂಟಿ ನಿಬಂಧಕರು, ಬೆಂಗಳೂರು ಪ್ರಾಂತ-1 ರವರ ಪತ್ರ ಕ್ರ:ಜೆಆರ್‌ಬಿ: ಆರ್‌ಬಿಎನ್: 97: 2001-02 ದಿನಾಂಕ: 4.1.2002 ಮತ್ತು 4.1.2002.
7. ಸಹಕಾರ ಸಂಘಗಳ ಜಂಟಿ ನಿಬಂಧಕರು, ಬೆಂಗಳೂರು ಪ್ರಾಂತ ಇವರ ಪತ್ರ ಸಂ:ಜೆಆರ್‌ಬಿ:ಆರ್‌ಬಿಎನ್:44: 2003-04 ದಿನಾಂಕ: 28.1.2004

**ಪ್ರಸ್ತಾವನೆ:**

ಇಂಡಸ್ಟ್ರಿಯಲ್ ಟೌನ್‌ಷಿಪ್ ಕೋ-ಆಪರೇಟಿವ್ ಸೊಸೈಟಿ ಲಿ., ಬೆಂಗಳೂರು ಇದನ್ನು ಸಹಕಾರ ಸಂಘಗಳ ಜಂಟಿ ನಿಬಂಧಕರು, ಬೆಂಗಳೂರು ವಿಭಾಗ, ಬೆಂಗಳೂರು ರವರು ತಮ್ಮ ಉಲ್ಲೇಖದಲ್ಲಿಯ ದಿನಾಂಕ: 28.3.2001ರ ಪತ್ರದನ್ವಯ ಸಂಘದ ಉಪ ನಿಯಮದಲ್ಲಿ ಬಹಳಷ್ಟು ಅವಕಾಶಗಳು ಕಾಯ್ದೆಗೆ ವಿರುದ್ಧವಾಗಿದ್ದುದರಿಂದ, ಮತ್ತು ಗುರುತರವಾದ ನ್ಯೂನತೆಗಳಿದ್ದ ಕಾರಣವಲ್ಲದೆ ಸಂಘವು ಒಂದು ವಿಶಿಷ್ಟ ರೀತಿಯ ಸಂಘವೆಂದು ಗುರುತಿಸಲಾಗಿತ್ತು. ಸಂಘದ ಉಪ ನಿಯಮಗಳನ್ನು ಸರಿಪಡಿಸಲು ಸಾಕಷ್ಟು ಕಾಲಾವಕಾಶ ಪಡೆದು ಮರು ಸಲ್ಲಿಸಲಾಗಿದ್ದ ಪ್ರಸ್ತಾವನೆಯನ್ನು ಪರಿಗಣಿಸಿ ದಿನಾಂಕ: 28.2.2001 ರಲ್ಲಿ ಸಂಘದ ನೋಂದಣಿ ಮಾಡಲಾಗಿರುತ್ತೆ. ಆದರೆ ಸಂಘವು ನೋಂದಣಿಯಾದ ಒಂದು ತಿಂಗಳೊಳಗಾಗಿ ಸಹಕಾರ ಸಂಘಗಳ ಕಾಯ್ದೆ 1959ರ ಕಲಂ 28(ಎ)(4)ರ ಪ್ರಕಾರ ಪ್ರಥಮ ಸರ್ವ ಸದಸ್ಯರ ಸಭೆ ಹಾಗೂ ಚುನಾವಣೆಯನ್ನು ನಡೆಸಲು ಚುನಾವಣಾಧಿಕಾರಿಯ ನೇಮಕಾತಿ ಮಾಡಲಾಗಿತ್ತು. ಆದರೆ ಸಂಘದ ಮುಖ್ಯ ಪ್ರವರ್ತಕರು ಆದೇಶವನ್ನು ತಡವಾಗಿ ಸ್ವೀಕರಿಸಿದ ಕಾರಣ ಚುನಾವಣೆ ಹಾಗೂ ಪ್ರಥಮ ಸರ್ವ ಸದಸ್ಯರ ಸಭೆಯನ್ನು ನಡೆಸಲು ದಿನಾಂಕ: 29.4.2001 ರವರೆಗೆ ವಿಸ್ತರಿಸಲು ಕೋರಿರುತ್ತಾರೆ. ವಿಸ್ತರಣೆಯ ಆದೇಶವು ಸರ್ಕಾರದ ಹಂತದಲ್ಲಿ ಆಗಬೇಕಾಗಿದ್ದ ಕಾರಣ ಈ ಕಛೇರಿಯ ಉಲ್ಲೇಖ(2)ರ ವಿವಿಧ ದಿನಾಂಕಗಳಲ್ಲಿ ಸರ್ಕಾರಕ್ಕೆ ಪತ್ರ ಬರೆದು ಸಹಕಾರ ಸಂಘಗಳ ಕಾಯ್ದೆ ಕಲಂ 132 ರಲ್ಲಿ ಅಧಿಕಾರವನ್ನು ಸರ್ಕಾರವು ಚಲಾಯಿಸಿ ಈ 28(ಎ)(4) ಅವಕಾಶಕ್ಕೆ ಸ್ಪಷ್ಟನೆ ನೀಡಿ ಪ್ರಕಟಣೆ ಹೊರಡಿಸಲು ಕೋರಲಾಗಿತ್ತು. ಸರ್ಕಾರವು ಉಲ್ಲೇಖ (5) ರಲ್ಲಿಯ ಅಧಿಸೂಚನೆಯನ್ವಯ ಸಹಕಾರ ಸಂಘಗಳ ಕಾಯ್ದೆ 1959 ಕಲಂ 121 ರಲ್ಲಿ ಪ್ರದತ್ತವಾದ ಅಧಿಕಾರವನ್ನು ಚಲಾಯಿಸಿ, ಅದೇ ಕಾಯ್ದೆಯ ಕಲಂ 28 ಎ(4) ರಡಿಯಲ್ಲಿ ವಿನಾಯಿತಿ ನೀಡಿ ಸದರಿ ಸಂಘದ ಮಹಾಸಭೆ ಮತ್ತು ಚುನಾವಣೆಯನ್ನು ಒಂದು ತಿಂಗಳೊಳಗೆ ನಡೆಸಲು ಅನುಮತಿ ನೀಡಿತ್ತು. ತದನಂತರ ಸಹಕಾರ ಸಂಘಗಳ ಜಂಟಿ ನಿಬಂಧಕರು, ಬೆಂಗಳೂರು ಪ್ರಾಂತ-1 ರವರು ತಮ್ಮ ಪತ್ರದಲ್ಲಿ ಸರ್ಕಾರವು ಒಂದು ತಿಂಗಳೊಳಗಾಗಿ ಸರ್ವ ಸದಸ್ಯರ ಸಭೆ ನಡೆಸಲು ಅವಕಾಶ ನೀಡಿದ್ದಾಗಲೂ ಕೂಡ ಸಂಘವು ದಿನಾಂಕ: 15.12.2001 ರಂದು ನಡೆದ ಆಡಳಿತ ಮಂಡಳಿಯ ತುರ್ತು ಸಭೆ ಸೇರಿ ಚರ್ಚಿಸಲಾಗಿ ಎಲ್ಲರ ಒಮ್ಮತದಂತೆ ಸಂಘದ ಸ್ಥಾಪನೆ ಹಾಗೂ ಅದರ ಕಾರ್ಯಚಟುವಟಿಕೆಗಳ ಬಗ್ಗೆ ಯಾರಿಗೂ ಉತ್ಸಾಹ ಇಲ್ಲದೆ ಇರುವುದರಿಂದ, ಸಂಘದ ಎಲ್ಲಾ ಸದಸ್ಯರು ಏಕೀಭವಿಸಿ ಸಂಘದ ನೋಂದಣಿಯನ್ನು ರದ್ದುಪಡಿಸುವಂತೆ ಕೋರುತ್ತಾ, ಬಿ.ಡಿ. ಮತ್ತು ಬಿ.ಆರ್. ಡಿ.ಸಿ.ಸಿ. ಬ್ಯಾಂಕಿನಲ್ಲಿರುವ ಅಮಾನತ್ ಠೇವಣಿ ರೂ.1,00,000-00 ಹಿಂದಕ್ಕೆ ಪಡೆಯುವಂತೆ ತೀರ್ಮಾನಿಸಿರುವ ಹಿನ್ನೆಲೆಯಲ್ಲಿ ಪ್ರಸ್ತಾವೆಯನ್ನು ಕೂಲಂಕುಷವಾಗಿ ಪರಿಶೀಲಿಸಿದ ನಂತರ ಹಾಗೂ ಸಹಕಾರ ಸಂಘಗಳ ಜಂಟಿ ನಿಬಂಧಕರು, ಬೆಂಗಳೂರು ಪ್ರಾಂತ-1 ರವರ ಉಲ್ಲೇಖ (6) ಮತ್ತು (7) ರಲ್ಲಿನ ಶಿಫಾರಸ್ಸಿನ ಕ್ರಮಗಳನ್ನು ಪರಿಗಣಿಸಿ, ಸಂಘವನ್ನು ಸಮಾಪನೆ ಗೊಳಿಸುವುದೇ ಸೂಕ್ತವೆಂದು ಪರಿಭಾವಿಸಿ ಕೆಳಕಂಡ ಆದೇಶವನ್ನು ಹೊರಡಿಸಲಾಗಿದೆ.

**ಆದೇಶ**

ಮೇಲಿನ ಎಲ್ಲಾ ಅಂಶಗಳನ್ನು ಗಮನಿಸಿ, ಟಿ. ನಾಗರಾಜ, ಸಹಕಾರ ಸಂಘಗಳ ಅಪರ ನಿಬಂಧಕರು (ಕೈಗಾರಿಕೆ ಮತ್ತು ಇತರೆ) ಆದ ನಾನು, ಸಹಕಾರ ಸಂಘಗಳ ಕಾಯ್ದೆ 1959ರ ಕಲಂ 72(2) ಬಿ ಹಾಗೂ ಸರ್ಕಾರದ ಅಧಿಸೂಚನೆ ಸಂ:ಸಿಎಂಡಬ್ಲ್ಯೂ:69:2001, ದಿನಾಂಕ: 21.11.2001 ರನ್ವಯ ದತ್ತವಾದ ಅಧಿಕಾರದ ಪ್ರಕಾರ ಇಂಡಸ್ಟ್ರಿಯಲ್ ಟೌನ್‌ಷಿಪ್ ಕೋ-ಆಪರೇಟಿವ್ ಸೊಸೈಟಿ ಲಿಮಿಟೆಡ್, ಬೆಂಗಳೂರು ಇದನ್ನು ಸಮಾಪನೆಗೊಳಿಸಿ, ಆದೇಶ ಹೊರಡಿಸಿ ಸಹಕಾರ ಸಂಘಗಳ ಕಾಯ್ದೆ 1959ರ ಕಲಂ 73(1) ರನ್ವಯ ಸಹಕಾರ ಅಭಿವೃದ್ಧಿ ಅಧಿಕಾರಿ, ಬೆಂಗಳೂರು ಉತ್ತರ ತಾಲ್ಲೂಕು, ಬೆಂಗಳೂರು ಇವರನ್ನು ಸಮಾಪನಾಧಿಕಾರಿಯನ್ನಾಗಿ ನೇಮಕ ಮಾಡಿರುತ್ತೇನೆ. ಸಮಾಪನಾಧಿಕಾರಿಗಳು ಸಂಘದ ಪ್ರಭಾರವನ್ನು 15 ದಿನಗಳೊಳಗಾಗಿ ಪಡೆದುಕೊಂಡು ಪ್ರಭಾರ ಪಟ್ಟಿ ಸಲ್ಲಿಸತಕ್ಕದ್ದು. ಅಲ್ಲದೆ ಸಂಘದ ಆರ್ಥಿಕ ತಃಖ್ತೆಗಳನ್ನು ಪರಿಶೀಲಿಸಿ ಸಂಘದ ನೋಂದಣಿ ರದ್ದತಿಗೆ ಪ್ರಸ್ತಾವೆ ಸಲ್ಲಿಸಲು ಕ್ರಮವಿಡುವುದು.

ಈ ಆದೇಶವನ್ನು ನನ್ನ ಸಹಿ ಹಾಗೂ ಕಛೇರಿಯ ಮೊಹರು ನಿಶಿಯೊಂದಿಗೆ ದಿನಾಂಕ: 21.2.2004 ರಂದು ನೀಡಲಾಗಿದೆ.

**ಬಿ. ನಾಗರಾಜ**

ಪಿ.ಆರ್. 448 ಸಹಕಾರ ಸಂಘಗಳ ಅಪರ ನಿಬಂಧಕರು, (ಕೈಗಾರಿಕೆ ಮತ್ತು ಇತರೆ).

**ನೋಂದಣಿ ಪ್ರಾಧಿಕಾರ ಮತ್ತು ಪ್ರಾದೇಶಿಕ ಸಾರಿಗೆ ಅಧಿಕಾರಿಗಳು, ಸಾರಿಗೆ ಇಲಾಖೆ, ಧಾರವಾಡ ಇವರ ನಡವಳಿಕೆಗಳು**

**ಹಾಜರಿದ್ದವರು :** ಶ್ರೀ ಎಸ್.ಹೆಚ್. ಕಲ್ಲೇರ್, ಪ್ರಾದೇಶಿಕ ಸಾರಿಗೆ ಅಧಿಕಾರಿಗಳು ಧಾರವಾಡ.

**ವಿಷಯ :** ಮೋಟಾರು ವಾಹನ ಸಂ:ಎಂವೈಎಲ್:6539ನ್ನು ಮೋಟಾರು ವಾಹನ ಕಾಯ್ದೆ 1988 ಕಲಂ 55(3) ರ ರೀತ್ಯಾ ನೋಂದಣಿ ಮತ್ತು ನೋಂದಣಿ ಪ್ರಮಾಣ ಪತ್ರವನ್ನು ರದ್ದುಪಡಿಸುವ ಬಗ್ಗೆ.

**ಉಲ್ಲೇಖ :** 1. ಮೋಟಾರು ವಾಹನ ಮಾಲೀಕರಾದ ಶ್ರೀ ಎಂ.ಜಿ. ಖೋಜೆ ಆಫ್ ಹುಬ್ಬಳ್ಳಿ

2. ಮೋಟಾರು ವಾಹನ ನಿರೀಕ್ಷಕರ ವರದಿ ದಿನಾಂಕ: 4.3.04

**ಪ್ರಸ್ತಾವನೆ:**

ಮೋಟಾರು ವಾಹನ ಮಾಲೀಕರಾದ ಶ್ರೀ ಮೊಹಮ್ಮದ್‌ಗೌಸ್ ಖೋಜೆ, ತಂದೆ: ಗಫಾರ್‌ಸಾಬ್ ರಫಾಯಿಹಾಳ್, ಕುಂದಗೋಳ, ಜಿ: ಧಾರವಾಡ ಇವರು ತಮ್ಮ ವಾಹನ ಸಂ:ಎಂವೈಎಲ್ 6539 ನ್ನು ರಸ್ತೆ ಉಪಯೋಗಕ್ಕೆ ಬರುವುದಿಲ್ಲವಾದ್ದರಿಂದ, ಸದರೀ ವಾಹನದ ನೋಂದಣಿ ರದ್ದುಪಡಿಸಬೇಕೆಂದು ವಿನಂತಿಸಿದ ಉಲ್ಲೇಖ (2) ರಲ್ಲಿ ಮೋಟಾರು ವಾಹನ ತನಿಖಾಧಿಕಾರಿಗಳು, ಧಾರವಾಡ ಇವರ ವರದಿ ದಿನಾಂಕ: 4.3.04ರಲ್ಲಿ ತಿಳಿಸಿರುವಂತೆ, ಸದರೀ ಮೋಟಾರು ವಾಹನವು ರಸ್ತೆ ಮೇಲೆ ಓಡುವ ಸ್ಥಿತಿಯಲ್ಲಿ ಇಲ್ಲವೆಂದು ತಿಳಿಸಿ, ನೋಂದಣಿಯನ್ನು ರದ್ದುಪಡಿಸಲು ಶಿಫಾರಸ್ಸು ಮಾಡಿರುತ್ತಾರೆ.

ಈ ಮೇಲಿನ ಎಲ್ಲ ಅಂಶಗಳನ್ನು ಮತ್ತು ವಾಹನದ ಕಡತವನ್ನು ಪರಿಶೀಲಿಸಿ, ಈ ಕೆಳಗಿನಂತೆ ಆದೇಶ ಹೊರಡಿಸಲಾಗಿದೆ.

**ಆದೇಶ**

**ಸಂ: ಪ್ರಾಸಾಅ:ಧಾ:03-04 7828: ದಿನಾಂಕ: 4ನೇ ಮಾರ್ಚ್ 2004**

ಮೋಟಾರು ವಾಹನ ಕಾಯ್ದೆ 1988 ಕಲಂ 55 1+(3) ರಲ್ಲಿ ಪ್ರದತ್ತವಾಗಿ ಬಂದಿರುವ ಅಧಿಕಾರವನ್ನು ಚಲಾಯಿಸಿ, ಶ್ರೀ ಎಸ್.ಹೆಚ್. ಕಲ್ಲೇರ್, ನೋಂದಣಿ ಪ್ರಾಧಿಕಾರ ಮತ್ತು ಪ್ರಾದೇಶಿಕ ಸಾರಿಗೆ ಅಧಿಕಾರಿ, ಧಾರವಾಡ ಆದ ನಾನು ವಾಹನ ಸಂ.ಎಂವೈಎಲ್: 6539ರ ನೋಂದಣಿಯ ಮುಂದೆ ಯಾವಾಗಲಾದರೂ ಲೆಕ್ಕ ತಪಾಸಣೆ ನಂತರ ಸರ್ಕಾರಕ್ಕೆ ಯಾವುದೇ ಬಾಕಿ ಇರುವುದು ಕಂಡು ಬಂದಲ್ಲಿ ಅದನ್ನು ಮೋಟಾರು ವಾಹನಮಾಲೀಕರು ತುಂಬಬೇಕೆಂಬ ಷರತ್ತಿನೊಂದಿಗೆ ವಾಹನದ ನೋಂದಣಿ ಮತ್ತು ನೋಂದಣಿ ಪ್ರಮಾಣ ಪತ್ರ ರದ್ದುಪಡಿಸಿರುತ್ತೇನೆ.

**ನೋಂದಣಿ ವಿವರಗಳು**

| | | | |
|---|---|---|---|
| 1. | ಮೋಟಾರು ವಾಹನ ಸಂ: ವರ್ಗ:ವಿಳಾಸ | : | ಎಂವೈಎಲ್:6539 |
| 2. | ನೋಂದಣಿ ದಿನಾಂಕ | : | 1(3-69) |
| 3. | ಚಾಸೀಸ್ ನಂ: | : | 34200 28614137 |
| 4. | ಇಂಜೀನ್ ನಂ: | : | 312 915 8614657 |
| 5. | ವಾಹನ ಮಾಲೀಕರ ಹೆಸರು | : | ಮೊಹಮ್ಮದ್ ಗೌಸ್ ಖೋಜೆ ತಂದೆ: ಗಫಾರ್‌ಸಾಬ್ ರಫಾಯಿಚಾಳ್, ಕುಂದಗೋಳ |

ಪಿ.ಆರ್. 449 ಪ್ರಾದೇಶಿಕ ಸಾರಿಗೆ ಅಧಿಕಾರಿ ಧಾರವಾಡ.

**ಸಹಕಾರ ಸಂಘಗಳ ಉಪನಿಬಂಧಕರ ಕಛೇರಿ, ಬೆಂಗಳೂರು ಗ್ರಾಮಾಂತರ ಜಿಲ್ಲೆ, ಬೆಂಗಳೂರು**

**ವಿಷಯ :** ಸಮಾಪನೆಯಲ್ಲಿರುವ ದೊಡ್ಡಬಳ್ಳಾಪುರ ಟೌನ್ ಸರ್ಕಾರಿ ನೌಕರರ ಸಹಕಾರ ಸಂಘ ನಿ., ದೊಡ್ಡಬಳ್ಳಾಪುರ ಇವರ ನೋಂದಣಿ ಸಂಖ್ಯೆಯನ್ನು ರದ್ದುಪಡಿಸುವ ಬಗ್ಗೆ.

**ಉಲ್ಲೇಖ :** 1. ಈ ಕಛೇರಿಯ ಸಮಾಪನಾ ಆದೇಶ ಸಂ: ಡಿಆರ್‌ಬಿ: ಆರ್:ಸಮಾಪನೆ:74:97-98 ದಿನಾಂಕ: 27.7.2000.

2. ಸ.ಸಂ.ಸ.ನಿ. ದೊ.ಪುರ ರವರ ಪತ್ರ ದಿನಾಂಕ: 24.1.04

**ಪ್ರಸ್ತಾವನೆ:**

ಸಹಕಾರ ಸಂಘಗಳ ಸಹಾಯಕ ನಿಬಂಧಕರು, ದೊಡ್ಡಬಳ್ಳಾಪುರ ರವರು ಉಲ್ಲೇಖ (2)ರ ಪತ್ರದಲ್ಲಿ ಕಾರ್ಯಾರಂಭ ಮಾಡದೇ ಸಮಾಪನೆಗೊಂಡ ದೊಡ್ಡಬಳ್ಳಾಪುರ ಟೌನ್ ಸರ್ಕಾರಿ ನೌಕರರ ಸಹಕಾರ ಸಂಘ ನಿ., ದೊಡ್ಡಬಳ್ಳಾಪುರ ಈ ಸಂಘದ ನೋಂದಣಿಯನ್ನು ರದ್ದುಗೊಳಿಸಲು ಶಿಫಾರಸ್ಸು ಮಾಡಿರುತ್ತಾರೆ.

ಪ್ರಸ್ತಾವನೆಯನ್ನು ಪರಿಶೀಲಿಸಲಾಗಿ ಈ ಸಂಘವು ನೋಂದಣಿ ಸಂಖ್ಯೆ: 1420, ದಿನಾಂಕ: 11.5.1956ರಲ್ಲಿ ನೋಂದಣಿಯಾಗಿದ್ದು ನೋಂದಣಿಯಾದ ಉದ್ದೇಶಗಳನ್ನು ಕಾರ್ಯರೂಪಗೊಳಿಸಿರುವುದಿಲ್ಲವೆಂದು, ಸಂಘದ ಕಾರ್ಯಕಾರಿ ಸಮಿತಿಯವರು ಈ ಸಹಕಾರ ಸಂಘವನ್ನು ಪುನಃಶ್ಚೇತನಗೊಳಿಸಲು ಯಾವ ಕ್ರಮವನ್ನು ತೆಗೆದುಕೊಳ್ಳದ ಕಾರಣ ಈ ಸಂಘದಿಂದ ಸದಸ್ಯರಿಗಾಗಲೀ, ಸಾರ್ವಜನಿಕರಿಗಾಗಲೀ, ಸರ್ಕಾರಕ್ಕಾಗಲೀ ಯಾವ ಪ್ರಯೋಜನವಿಲ್ಲವೆಂದು ಪರಿಗಣಿಸಿ ಉಲ್ಲೇಖ (1) ರ ಪತ್ರದ ಆದೇಶದ ರೀತ್ಯಾ ಸಮಾಪನೆಗೊಳಿಸಲಾಗಿತ್ತು.

ಈ ಸಂಘದಲ್ಲಿ ಒಟ್ಟು ರೂ. 18515-55ಗಳ ಜವಾಬ್ದಾರಿಗಳು ಮತ್ತು ರೂ. 35365-00 ಗಳ ಆಸ್ತಿಗಳಿರುತ್ತವೆ. ಸಂಘವು 2001-02 ರವರೆಗೆ ಲೆಕ್ಕಪರಿಶೋಧನೆಯಾಗಿದ್ದು, ನಿವ್ವಳ ನಷ್ಟ ರೂ. 686-56 ಗಳು ಮತ್ತು ನಿವ್ವಳ ಲಾಭ ರೂ. 17536-71 ಗಳಿದ್ದು, ಜಿಲ್ಲಾ ಬ್ಯಾಂಕ್ ಚಾಲ್ತಿ ಖಾತೆಯಲ್ಲಿ ರೂ. 12420-00 ಮತ್ತು ಆಪದ್ಧನ ನಿಧಿ ರೂ. 3531-00 ಗಳಿದ್ದು ಈ ಹಣವನ್ನು ಡ್ರಾ ಮಾಡಿ ಪಾವತಿಸಲು ಜವಾಬ್ದಾರಿ ಕಡೆ ಇರುವ ಬಾಬ್ತುಗಳಿಗೆ ಯಾವುದೇ ವಿವರಗಳು ಸಂಘದಲ್ಲಿ ಲಭ್ಯವಿಲ್ಲದ್ದರಿಂದ, ಈ ಹಣ ರೂ. 12773 ಗಳನ್ನು ಬೆಂಗಳೂರು ನಗರ ಹಾಗೂ ಗ್ರಾಮಾಂತರ ಜಿಲ್ಲಾ ಸಹಕಾರ ಕೇಂದ್ರ ಬ್ಯಾಂಕ್ ನಿ, ಬೆಂಗಳೂರು ಇಲ್ಲಿ ಸಹಕಾರ ಸಂಘಗಳ ಉಪನಿಬಂಧಕರು, ಬೆಂಗಳೂರು ಗ್ರಾಮಾಂತರ ಜಿಲ್ಲೆ, ಬೆಂಗಳೂರು ರವರ ಸಮಾಪನಾ ಸಂಘಗಳ ಪಿ.ಡಿ. ಖಾತೆ ಸಂ: 321: 12ಎ ಈ ಖಾತೆಗೆ ದಿನಾಂಕ: 22.1.04 ರಂದು ಸಮಾಪನಾಧಿಕಾರಿಯವರು ವರ್ಗಾಯಿಸಿರುತ್ತಾರೆ. ಉಳಿದಂತೆ ಯಾವುದೇ ಆಸ್ತಿಗಳು ವಿವರಗಳು ಮತ್ತು ದಾಖಲಾತಿಗಳು ಸಂಘದಲ್ಲಿ ಲಭ್ಯವಿಲ್ಲದ ಪ್ರಯುಕ್ತ ವಸೂಲಿ ಮಾಡಲು ಸಾಧ್ಯವಾಗಿರುವುದಿಲ್ಲವೆಂದು, ನಷ್ಟಕ್ಕೆ ಲೆಕ್ಕ ಹೊಂದಾಣಿಕೆ ಮಾಡಿರುತ್ತಾರೆ. ಈ ಸಂಘವು ಹೀಗೆಯೇ ಮುಂದುವರೆಯುವುದರಿಂದ, ಸದಸ್ಯರಿಗಾಗಲೀ, ಸಾರ್ವಜನಿಕರಿಗಾಗಲೀ, ಸರ್ಕಾರಕ್ಕಾಗಲೀ ಯಾವ ಪ್ರಯೋಜನವಿಲ್ಲವೆಂದು ಪರಿಗಣಿಸಿ ಈ ಕೆಳಕಂಡಂತೆ ಆದೇಶವನ್ನು ಹೊರಡಿಸಿರುತ್ತೇನೆ.

**ಆದೇಶ**

**ಸಂ:ಡಿಆರ್‌ಬಿ:ಆರ್:ಸಮಾಪನೆ:137:03-04 ದಿನಾಂಕ: 28ನೇ ಫೆಬ್ರವರಿ 04**

ಪ್ರಸ್ತಾವನೆಯಲ್ಲಿ ವಿವರಿಸಿರುವಂತೆ ಕರ್ನಾಟಕ ಸಹಕಾರ ಸಂಘಗಳ ಕಾಯ್ದೆ ಕಲಂ 75 ರನ್ವಯ ಹಾಗೂ ಸರ್ಕಾರದ ಅಧಿಸೂಚನೆ ಸಂ: ಸಿಎಂಡಬ್ಲ್ಯೂ:69:ಸಿಎಲ್ಎಂ: 2001 ದಿನಾಂಕ: 21.11.01 ರಂತೆ ನನಗೆ ದತ್ತವಾಗಿರುವ ಅಧಿಕಾರವನ್ನು ಉಪಯೋಗಿಸಿ, ಭೀಮಸೇನ ಬಂಕದ, ಸಹಕಾರ ಸಂಘಗಳ ಉಪನಿಬಂಧಕರು, ಬೆಂಗಳೂರು ಗ್ರಾಮಾಂತರ ಜಿಲ್ಲೆ, ಬೆಂಗಳೂರು ಆದ ನಾನು ದೊಡ್ಡಬಳ್ಳಾಪುರ ಟೌನ್ ಸರ್ಕಾರಿ ನೌಕರರ ಸಹಕಾರ ಸಂಘ ನಿ., ದೊಡ್ಡಬಳ್ಳಾಪುರ ಈ ಸಹಕಾರ ಸಂಘದ ನೋಂದಣಿಯನ್ನು ರದ್ದುಗೊಳಿಸಿ ಆದೇಶ ಹೊರಡಿಸಿರುತ್ತೇನೆ.

ಈ ಆದೇಶವನ್ನು ನನ್ನ ಸ್ವಸಹಿ ಹಾಗೂ ಕಛೇರಿಯ ಮುದ್ರೆಯೊಂದಿಗೆ ದಿನಾಂಕ: 28.2.2004 ರಂದು ಹೊರಡಿಸಿರುತ್ತೇನೆ.

ಸಹಕಾರ ಸಂಘಗಳ ಉಪನಿಬಂಧಕರು,

ಪಿ.ಆರ್. 450 ಬೆಂಗಳೂರು ಗ್ರಾಮಾಂತರ ಜಿಲ್ಲೆ, ಬೆಂಗಳೂರು.

**ಆರೋಗ್ಯ ಮತ್ತು ಕುಟುಂಬ ಕಲ್ಯಾಣ ಸೇವೆಗಳ ನಿರ್ದೇಶನಾಲಯದ ನಡವಳಿಗಳು**

**ವಿಷಯ :** ಶ್ರೀಮತಿ: ದೇವಕಾಂತ, ಶುಶ್ರೂಷಕಿ, ವಾಣಿವಿಲಾಸ್ ಆಸ್ಪತ್ರೆ, ಬೆಂಗಳೂರು.

**ಓದಲಾಗಿದೆ :**
1. ನಿರ್ದೇಶನಾಲಯದ ದೋಷಾರೋಪಣೆ ಹಾಗೂ ತಿಳುವಳಿಕೆಯ ಪತ್ರದ ಸಂ: ಡಿಪಿಎನ್(1)ಸಿಆರ್:59:97-98 ದಿನಾಂಕ: 17.7.01
2. ನೌಕರರ ಲಿಖಿತ ಅಹವಾಲು ಪತ್ರ ದಿನಾಂಕ: 27.8.01.
3. ವಿಚಾರಣಾಧಿಕಾರಿಗಳ ನೇಮಕಾತಿ ಆದೇಶ ಸಂ:ಡಿಪಿಎನ್(1) ಸಿಆರ್:59:97-98, ದಿನಾಂಕ: 30.5.2002.
4. ವಿಚಾರಣಾ ವರದಿಯ ಸಂ:ವಿಅ: ವಿಚಾರಣೆ: ಎನ್‌ಜಿ:42:02-03. ದಿನಾಂಕ: 13.12.02.
5. ವಿಚಾರಣಾ ವರದಿ ನೌಕರರಿಗೆ ಜಾರಿ ಮಾಡಿದ ಸೂಚನಾ ಪತ್ರ ಸಂ:ಡಿಪಿಎನ್(1)ಸಿಆರ್:59:97-98 ದಿನಾಂಕ: 6.2.03.
6. ನೌಕರರ ಲಿಖಿತ ಅಹವಾಲು ಪತ್ರ ದಿನಾಂಕ: 11.3.2003.

**ಪ್ರಸ್ತಾವನೆ:**

ಶ್ರೀಮತಿ. ದೇವಕಾಂತ, ಶುಶ್ರೂಷಕಿ, ವಾಣಿವಿಲಾಸ್ ಆಸ್ಪತ್ರೆ, ಇವರು ಈ ಹಿಂದೆ ನಿಯೋಜನೆ ಮೇಲೆ ಅರಬ್ ರಿಪಬ್ಲಿಕ್ ಇಲ್ಲಿ ಕರ್ತವ್ಯ ನಿರ್ವಹಿಸುತ್ತಿದ್ದು, ದಿನಾಂಕ: 1.1.84 ರಿಂದ 9.8.99 ರವರೆಗೆ ಅನಧಿಕೃತ ಗೈರುಹಾಜರಿ ಆಗಿದ್ದು, ಇವರ ಬಗ್ಗೆ ಮೇಲೆ ಓದಲಾದ (1) ರಲ್ಲಿನ ಪತ್ರದಲ್ಲಿ ತಿಳುವಳಿಕೆ ಹಾಗೂ ದೋಷಾರೋಪಣಾ ಪಟ್ಟಿಯನ್ನು ಜಾರಿಗೊಳಿಸಿದ್ದು, ಇದಕ್ಕೆ ಅನುಗುಣವಾಗಿ ನೌಕರರು ಮೇಲೆ ಓದಲಾದ (2)ರಲ್ಲಿನ ಪತ್ರದಲ್ಲಿ ತನ್ನ ಲಿಖಿತ ಅಹವಾಲನ್ನು ಸಲ್ಲಿಸಿದಂತೆ ಪರಿಶೀಲಿಸಿ, ಅದು ಸಮರ್ಪಕವಾಗಿರದ ಕಾರಣ ಸತ್ಯಾಸತ್ಯತೆಯನ್ನು ಕಂಡುಕೊಳ್ಳುವುದು ಸೂಕ್ತವೆಂದು ನಿರ್ಣಯಿಸಿ ಮೇಲೆ ಓದಲಾದ (3) ರಲ್ಲಿನ ಆದೇಶದಲ್ಲಿ ಮುಖ್ಯ ಜಾಗೃತಾಧಿಕಾರಿಗಳು, ಜಾಗೃತಕೋಶ, ಆರೋಗ್ಯ ಮತ್ತು ಕುಟುಂಬ ಕಲ್ಯಾಣ ಸೇವೆಗಳ ನಿರ್ದೇಶನಾಲಯ, ಬೆಂಗಳೂರು ಇವರನ್ನು ವಿಚಾರಣಾಧಿಕಾರಿಯನ್ನಾಗಿ ನೇಮಿಸಿದ್ದಂತೆ ರೀತ್ಯಾ ಮೇಲೆ ಓದಲಾದ (4)ರಲ್ಲಿನ ಆದೇಶದಂತೆ ವಿಚಾರಣೆ ನಡೆಸಿ ವರದಿಯನ್ನು ಸಲ್ಲಿಸಿದ್ದಂತೆ ಮೇಲೆ ಓದಲಾದ (5) ರಲ್ಲಿನ ಸೂಚನಾ ಪತ್ರದಲ್ಲಿ ವಿಚಾರಣೆ ವರದಿಯ ಪ್ರತಿಯನ್ನು ಜಾರಿಗೊಳಿಸಿದ್ದಕ್ಕನುಗುಣವಾಗಿ ಮೇಲೆ ಓದಲಾದ (6)ರಲ್ಲಿ ನೌಕರರು ತನ್ನ ಲಿಖಿತ ಅಹವಾಲನ್ನು ಸಲ್ಲಿಸಿರುತ್ತಾರೆ.

ನೌಕರರು ಸಲ್ಲಿಸಿರುವ ಲಿಖಿತ ಅಹವಾಲು ಹಾಗೂ ವಿಚಾರಣಾಧಿಕಾರಿಗಳು ನೀಡಿರುವ ವಿಚಾರಣಾ ವರದಿಯಲ್ಲಿ ನಿರ್ಣಯದ ವರದಿಯನ್ನು ಪರಿಶೀಲಿಸಿದ ತರುವಾಯ ಕೆಳಕಂಡಂತೆ ಆದೇಶ ಹೊರಡಿಸಿದೆ.

**ಆದೇಶ ಸಂಖ್ಯೆ:ಡಿಪಿಎನ್(1)ಸಿಆರ್:59:97-98, ಬೆಂಗಳೂರು, ದಿನಾಂಕ: 12ನೇ ಮಾರ್ಚ್ 04**

1957ರ ಕರ್ನಾಟಕ ನಾಗರೀಕ ಸೇವಾ (ವರ್ಗೀಕರಣ, ನಿಯಂತ್ರಣ ಮತ್ತು ಮೇಲ್ಮನವಿ) ನಿಯಮಗಳ ಅಡಿಯಲ್ಲಿ ಪ್ರದತ್ತವಾದ ಅಧಿಕಾರವನ್ನು ಚಲಾಯಿಸಿ ಡಾ: ಜಿ. ಬಿ. ದೇಸಾಯಿ, ಆರೋಗ್ಯ ಮತ್ತು ಕು.ಕ. ಸೇವೆಗಳ ನಿರ್ದೇಶಕರು, ಆದ ನಾನು ಶ್ರೀಮತಿ ದೇವಕಾಂತ, ಶುಶ್ರೂಷಕಿ, ವಾಣಿವಿಲಾಸ್ ಆಸ್ಪತ್ರೆ, ಬೆಂಗಳೂರು ಇವರು ಸರ್ಕಾರಿ ಸೇವೆಗೆ ದಿನಾಂಕ: 1.1.84 ರಿಂದ 9.8.99 ರ ವರೆಗೆ ಅನಧಿಕೃತ ಗೈರುಹಾಜರಿ ಆಗಿರುವುದು ಸಾಬೀತಾಗಿರುವುದರಿಂದ, ದಂಡನೆಯಾಗಿ ಸದರಿ ನಿಯಮ 8(8)ರ ಪ್ರಕಾರ ಸೇವೆಯಿಂದ ವಜಾಮಾಡುವ ದಂಡನೆ ವಿಧಿಸಿದ್ದೇನೆ.

**ಡಾ. ಜಿ. ಬಿ. ದೇಸಾಯಿ**

ಪಿ.ಆರ್. 451 ನಿರ್ದೇಶಕರು, ಆರೋಗ್ಯ ಮತ್ತು ಕುಟುಂಬ ಕಲ್ಯಾಣ ಸೇವೆಗಳು.

**ಆರೋಗ್ಯ ಮತ್ತು ಕುಟುಂಬ ಕಲ್ಯಾಣ ಸೇವೆಗಳ ನಿರ್ದೇಶನಾಲಯ**

**ಯೋಜನಾ ನಿರ್ದೇಶಕರ ಕಛೇರಿ (ಆರ್.ಸಿ.ಹೆಚ್) ಆನಂದರಾವ್ ವೃತ್ತ, ಬೆಂಗಳೂರು**

**ಸುತ್ತೋಲೆ ಸಂಖ್ಯೆ:ಎಂಸಿಟಿ:67:03-04 ದಿನಾಂಕ: 5ನೇ ಮಾರ್ಚ್ 2004**

**ವಿಷಯ :** ಕಿರಿಯ ಮಹಿಳಾ ಆರೋಗ್ಯ ಸಹಾಯಕಿಯರ ತರಬೇತಿಗಾಗಿ ಅರ್ಜಿಗಳನ್ನು ಕರೆಯುವ ಬಗ್ಗೆ.

ರಾಜ್ಯದ 19 ಜಿಲ್ಲೆಗಳಲ್ಲಿರುವ ಕಿರಿಯ ಮಹಿಳಾ ಆರೋಗ್ಯ ಸಹಾಯಕಿಯರ ತರಬೇತಿ ಶಾಲೆಗಳಲ್ಲಿ 18 ತಿಂಗಳುಗಳ ತರಬೇತಿಗಾಗಿ ಅರ್ಹ ಮಹಿಳಾ ಅಭ್ಯರ್ಥಿಗಳಿಂದ ಅರ್ಜಿಗಳನ್ನು ಕರೆಯಲಾಗಿದೆ.

ಅರ್ಜಿಗಳನ್ನು ದಿನಾಂಕ: 05.04.2004 ರಿಂದ ಸಂಬಂಧಪಟ್ಟ ಆಯಾ ಜಿಲ್ಲಾ ಆರೋಗ್ಯ ಮತ್ತು ಕುಟುಂಬ ಕಲ್ಯಾಣ ಅಧಿಕಾರಿಗಳವರ ಕಛೇರಿಯಿಂದ ಪಡೆಯಬಹುದು. ಅರ್ಜಿಗಳನ್ನು ದ್ವಿಪ್ರತಿಗಳಲ್ಲಿ ಸಲ್ಲಿಸಬೇಕು. ದ್ವಿಪ್ರತಿಗಳ ಅರ್ಜಿಯ ಬೆಲೆ 10-00 ರೂ. ಗಳು ನಗದು ಪಾವತಿ ಮಾಡಿ ಅರ್ಜಿಗಳನ್ನು ಪಡೆಯಬಹುದು.

ಭರ್ತಿ ಮಾಡಿದ ಅರ್ಜಿಗಳನ್ನು ಆಯಾ ಜಿಲ್ಲೆಗಳ ಆರೋಗ್ಯ ಮತ್ತು ಕುಟುಂಬ ಕಲ್ಯಾಣ ಅಧಿಕಾರಿಗಳವರ ಕಛೇರಿಯಲ್ಲಿ ದಿನಾಂಕ: 04.05.2004 ವರೆಗೆ ಮಾತ್ರ ಸ್ವೀಕರಿಸಲಾಗುವುದು. ನಿಗದಿತ ನಮೂನೆಯಲ್ಲಿ ಮಾತ್ರ ಅರ್ಜಿಗಳನ್ನು ಸಲ್ಲಿಸಬೇಕು. ನಿಗದಿತ ನಮೂನೆಯಲ್ಲಿಲ್ಲದ ಮತ್ತು ನಿಗದಿತ ದಿನಾಂಕದ ನಂತರ ಬಂದ ಅರ್ಜಿಗಳನ್ನು ತಿರಸ್ಕರಿಸಲಾಗುವುದು.

1 ಅರ್ಹತೆ : 1. ಎಸ್.ಎಸ್.ಎಲ್.ಸಿ. ಪರೀಕ್ಷೆಯಲ್ಲಿ ಅಥವಾ ತತ್ಸಮಾನ ಪರೀಕ್ಷೆಯಲ್ಲಿ ಉತ್ತೀರ್ಣರಾಗಿರಬೇಕು.
2. ವಯೋಮಿತಿ: ಕನಿಷ್ಠ 18 ವರ್ಷಗಳು ಮತ್ತು ಗರಿಷ್ಠ 35 ವರ್ಷಗಳು. (ಅರ್ಜಿಸಲ್ಲಿಸಲು ನಿಗದಿಪಡಿಸಿರುವ ಕೊನೆಯ ದಿನಾಂಕಕ್ಕೆ ವಯೋಮಿತಿಯನ್ನು ಗಣನೆಗೆ ತೆಗೆದುಕೊಳ್ಳಲಾಗುವುದು).

2 ಇತರೆ ನಿಬಂಧನೆಗಳು: 1. ಅಭ್ಯರ್ಥಿಗಳು ಭಾರತೀಯ ನಾಗರೀಕರಾಗಿದ್ದು ಕನಿಷ್ಠ 5 ವರ್ಷಗಳು ಕರ್ನಾಟಕ ರಾಜ್ಯದಲ್ಲಿ ವಿದ್ಯಾಭ್ಯಾಸ ಮಾಡಿರಬೇಕು
2. ಕನ್ನಡ ಭಾಷೆಯ ಪೂರ್ಣ ಪರಿಜ್ಞಾನ ಉಳ್ಳವರಾಗಿರಬೇಕು.

3 ಆದ್ಯತೆ: 1. ಆಯಾ ಜಿಲ್ಲೆಯ ಗ್ರಾಮಾಂತರ ಪ್ರದೇಶದ ಅಭ್ಯರ್ಥಿಗಳಿಗೆ.
2. ಗಂಡನಿಂದ ಪರಿತ್ಯಕ್ತರಾದವರಿಗೆ, ವಿಧವೆಯರಿಗೆ ಮತ್ತು ಮದುವೆಯಾಗದ ಮಹಿಳೆಯರಿಗೆ,
3. ಆರೋಗ್ಯ ಮತ್ತು ಕು.ಕ ಸೇವೆಯ ಇಲಾಖೆಯಲ್ಲಿ ಕೆಲಸ ಮಾಡಿರುವ ಅಥವಾ ಕೆಲಸ ಮಾಡುತ್ತಿರುವವರಿಗೆ ಅರ್ಹತೆಯಿದ್ದಲ್ಲಿ ಆದ್ಯತೆ ನೀಡಲಾಗುವುದು.
4. ಯೋಜನಾ ಸಂತ್ರಸ್ತರಿಗೆ.

4 ಅರ್ಜಿಯೊಂದಿಗೆ ಸಲ್ಲಿಸಬೇಕಾದ ಲಗತ್ತುಗಳು.

1. ಅಭ್ಯರ್ಥಿಯು ಸಹಿ ಮಾಡಿರುವ ಪಾಸ್ ಪೋರ್ಟ್ ಸೈಜಿನ ಭಾವಚಿತ್ರಗಳನ್ನು ಎರಡೂ ಅರ್ಜಿಗಳ ಬಲಭಾಗದ ಮೇಲ್ಭಾಗದಲ್ಲಿ ಅಂಟಿಸಬೇಕು.
2. ದೃಢೀಕರಿಸಿದ ಈ ಕೆಳಗಿನ ದಾಖಲೆಗಳನ್ನು ದ್ವಿಪ್ರತಿಗಳಲ್ಲಿ ಸಲ್ಲಿಸಬೇಕು. (ಅ)ಜನ್ಮ ದಿನಾಂಕದ ದಾಖಲೆ (ಆ) ವಿದ್ಯಾರ್ಹತೆಯ ದಾಖಲೆ (ಇ) ಜಾತಿ ವರಮಾನ ಪ್ರಮಾಣ ಪತ್ರ (ಈ) ಜಾತಿ ಪ್ರಮಾಣ ಪತ್ರ, (ಉ) ಯೋಜನಾ ಸಂತ್ರಸ್ತರ ಪ್ರಮಾಣ ಪತ್ರಗಳನ್ನು ಅರ್ಜಿಯಲ್ಲಿ ತಿಳಿಸಿರುವ ನಮೂನೆಯಲ್ಲಿ ಸಲ್ಲಿಸುವುದು. (ಊ) ಇಬ್ಬರು ಗಣ್ಯ ವ್ಯಕ್ತಿಗಳಿಂದ ಮತ್ತು ಶಾಲೆಯಿಂದ ಪಡೆದ ನಡವಳಿಕೆ ಪ್ರಮಾಣ ಪತ್ರಗಳು (ಊ) ಅಭ್ಯರ್ಥಿಯು ಸ್ವತಃ ಬರೆದ ಕನ್ನಡ ಬರವಣಿಗೆಯ ಒಂದು ಪುಟ (ಋ) ವೈದ್ಯಕೀಯ ಪ್ರಮಾಣ ಪತ್ರ ಮತ್ತು ಅರ್ಜಿಯಲ್ಲಿ ತಿಳಿಸಿರುವ ಇತರ ಪ್ರಮಾಣ ಪತ್ರಗಳು.

5 ಸೂಚನೆಗಳು:

1. ಅಭ್ಯರ್ಥಿಯು ಅರ್ಜಿಯಲ್ಲಿ ತನ್ನ ಹೆಸರನ್ನು ಮತ್ತು ತಂದೆಯ ಹೆಸರನ್ನು ಎಸ್.ಎಸ್.ಎಲ್.ಸಿ. ಅಂಕಪಟ್ಟಿಯಲ್ಲಿರುವಂತೆ ಬರೆಯಬೇಕು.
2. ಅಭ್ಯರ್ಥಿಯು ಸ್ವತಃ ಅರ್ಜಿಗಳನ್ನು ಯಾವ ಅಂಕಣವನ್ನು ಖಾಲಿ ಬಿಡದಂತೆ ಅರ್ಜಿಯನ್ನು ಸ್ವಹಸ್ತಾಕ್ಷರದಲ್ಲಿ ಭರ್ತಿ ಮಾಡಬೇಕು.
3. ಸಂಬಂಧಿಸಿದ ಅಧಿಕಾರಿಗಳು ನೀಡಿದ ಜಾತಿ ಮತ್ತು ವರಮಾನ ಪ್ರಮಾಣ ಪತ್ರಗಳನ್ನು ಮಾತ್ರ ಪರಿಗಣಿಸಲಾಗುವುದು.
4. ಅಪೂರ್ಣವಾದ ಮತ್ತು ಕೇಳಿರುವ ದಾಖಲೆಗಳನ್ನು ಲಗತ್ತಿಸದಿದ್ದಲ್ಲಿ ಅರ್ಜಿಗಳನ್ನು ತಿರಸ್ಕರಿಸಲಾಗುವುದು.
5. ಅಗತ್ಯವಾದ ಇತರೆ ಮಾಹಿತಿಯನ್ನು ಆಯಾ ಜಿಲ್ಲೆಯ ಆರೋಗ್ಯ ಮತ್ತು ಕು.ಕ ಅಧಿಕಾರಿಯವರಿಂದ ಪಡೆಯಬಹುದು.
6. ಇಲಾಖಾ ಅಭ್ಯರ್ಥಿಗಳು ಮೇಲಾಧಿಕಾರಿಗಳ ಮುಖಾಂತರ ಅರ್ಜಿಗಳನ್ನು ಸಲ್ಲಿಸಬೇಕು.
7. ಅರ್ಜಿ ಮತ್ತು ಇತರ ದಾಖಲೆಗಳನ್ನು ಒಳಗೊಂಡ ಲಕೋಟೆಯ ಮೇಲೆ ಕಿರಿಯ ಮಹಿಳಾ ಆರೋಗ್ಯ ಸಹಾಯಕಿಯ ತರಬೇತಿಗಾಗಿ ಅರ್ಜಿ ಎಂದು ನಮೂದಿಸಬೇಕು.
8. ಆಯ್ಕೆಯ ಸಂದರ್ಶನ ವೇಳೆಯಲ್ಲಿ ಅಸಮರ್ಪಕ ದೋಷಪೂರಿತ ಅಥವಾ ಸೃಷ್ಟಿಸಿದ ದಾಖಲೆಗಳನ್ನು ಸಲ್ಲಿಸಿರುವುದು ಕಂಡುಬಂದಲ್ಲಿ ಹಾಗೂ ಆಯ್ಕೆಗಾಗಿ ಒತ್ತಡ ಶಿಫಾರಸ್ಸು ಇತರೆ ಆಮಿಷಗಳನ್ನು ತೋರಿಸುವವರ ವಿರುದ್ಧ ಭಾರತೀಯ ದಂಡ ಸಂಹಿತೆಯನುಸಾರ ಕ್ರಮ ತೆಗೆದುಕೊಳ್ಳುವುದಲ್ಲದೆ ಅರ್ಜಿಗಳನ್ನು ತಿರಸ್ಕರಿಸಲಾಗುವುದು.
9. ಗರ್ಭವತಿಯರಾದ ಅಭ್ಯರ್ಥಿಗಳಿಗೆ ತರಬೇತಿ ಸೇರಲು ಅವಕಾಶವಿರುವುದಿಲ್ಲ. ಮತ್ತು ತರಬೇತಿ ಅವಧಿಯಲ್ಲಿ ಗರ್ಭವತಿಯಾದ ವಿದ್ಯಾರ್ಥಿನಿಯನ್ನು ತರಬೇತಿಯಿಂದ ಮುಕ್ತಗೊಳಿಸಲಾಗುವುದು.
10. ತರಬೇತಿ ಅವಧಿ: ತರಬೇತಿ ಅವಧಿಯು ತರಬೇತಿ ಪ್ರಾರಂಭದ ದಿನಾಂಕದಿಂದ 18 ತಿಂಗಳು ಗಳಾಗಿರುವುದು. ಆಯ್ಕೆಯಾದ ಅಭ್ಯರ್ಥಿಗಳಿಗೆ ತರಬೇತಿಯು ಪ್ರಾರಂಭವಾಗುವ ದಿನಾಂಕವನ್ನು ಸೂಕ್ತ ಸಮಯದಲ್ಲಿ ತಿಳಿಸಲಾಗುವುದು.
11. ತರಬೇತಿ ಪರೀಕ್ಷೆಯಲ್ಲಿ ತೇರ್ಗಡೆಯಾದ ಅಭ್ಯರ್ಥಿಗಳಿಗೆ ನೇಮಕಾತಿಯ ಹಕ್ಕು ಪ್ರಾಪ್ತವಾಗುವುದಿಲ್ಲ. ಆಯ್ಕೆಯಾದ ಅಭ್ಯರ್ಥಿಗಳಿಗೆ ಸರ್ಕಾರವು ಶಿಷ್ಯವೇತನವನ್ನು ನೀಡಲಾಗುವುದು. ಶಿಷ್ಯವೇತನವನ್ನು ಪಡೆಯುವ ಅಭ್ಯರ್ಥಿಗಳು ಸರ್ಕಾರದಲ್ಲಿ 3 ವರ್ಷಗಳ ಸೇವೆ ಸಲ್ಲಿಸುವುದಾಗಿ ಜಾಮೀನು ಪತ್ರವನ್ನು ಗೊತ್ತುಪಡಿಸಿದ ನಮೂನೆಯಲ್ಲಿ ಸಲ್ಲಿಸಬೇಕು.
12. ಮೀಸಲಾತಿ: ಸರ್ಕಾರಿ ಆದೇಶ ಸಂಖ್ಯೆ: ಸಿಆಸುಇ: 08 ಸೆಹಿಮ 95 ದಿನಾಂಕ: 20.06.1995 ಅನ್ವಯ ಆಯ್ಕೆ ಮಾಡಲಾಗುವುದು.
13. ತರಬೇತಿಯ ಒಟ್ಟು ಸ್ಥಾನಗಳು-570

| | |
|---|---|
| ಸಾಮಾನ್ಯ ವರ್ಗ | - 285 |
| ಮೀಸಲಾತಿ ಸ್ಥಾನಗಳು | - 285 |
| ಒಟ್ಟು | - 570 |

14. ಆಯ್ಕೆಯನ್ನು ಜಾರಿಯಲ್ಲಿರುವ ಮೀಸಲಾತಿ ನಿಯಮಾವಳಿ ಅನುಸಾರ ಮತ್ತು ಎಸ್.ಎಸ್.ಎಲ್.ಸಿ ಪರೀಕ್ಷೆಯಲ್ಲಿ ಗಳಿಸಿದ ಅಂಕಗಳ ಆಧಾರದ ಮೇಲೆ ಮಾಡಲಾಗುವುದು.
15. ಆಯ್ಕೆಯ ಸಂಬಂಧದಲ್ಲಿ ಆರೋಗ್ಯ ಮತ್ತು ಕುಟುಂಬ ಕಲ್ಯಾಣ ಸೇವೆಗಳ ನಿರ್ದೇಶಕರ ತೀರ್ಮಾನವೇ ಅಂತಿಮವಾದುದು. ಇದರ ಬಗ್ಗೆ ಯಾವುದೇ ರೀತಿ ಪತ್ರ ವ್ಯವಹಾರವನ್ನು ಮಾಡಲಾಗುವುದಿಲ್ಲ.

ಪಿ.ಆರ್. 452 ನಿರ್ದೇಶಕರು, ಆರೋಗ್ಯ ಮತ್ತು ಕುಟುಂಬ ಕಲ್ಯಾಣ ಸೇವೆಗಳು.

**ಕಾರ್ಮಿಕ ಅಧಿಕಾರಿ ಹಾಗೂ ಕಾರ್ಮಿಕ ನಷ್ಟ ಪರಿಹಾರ ಆಯುಕ್ತರ ನ್ಯಾಯಾಲಯ, ಹಾಸನ ಜಿಲ್ಲೆ, ಹಾಸನ**

**ಸಂ: ಕಾಪಕಾ:ಎಫ್:ಎಸ್ಆರ್:36/2001**

**ಅರ್ಜಿದಾರರು :** 1. ಶ್ರೀಮತಿ ಪುನೀತಾ, ಸುಮಾರು 34 ವರ್ಷ ಕೋಂ. ಲೇಟ್ ಜಯರಾಂ.
2. ಕು: ಲಾವಣ್ಯ, ಸುಮಾರು 16 ವರ್ಷ, ಬಿನ್ ಲೇಟ್ ಜಯರಾಂ,
3. ಕು: ಕುಮುದಾ, ಸುಮಾರು 14 ವರ್ಷ, ಬಿನ್ ಲೇಟ್ ಜಯರಾಂ
ವಾಸ: ಕೇರಾಫ್ ರಾಮಚಂದ್ರ, ಲಲಿತಾ ನಿಲಯ, ಹೇಮಾವತಿನಗರ, ಪಿ & ಟಿ ಕಾಲೋನಿ ರಸ್ತೆ, ಹಾಸನ.

**ವಿರುದ್ಧ**

**ಪ್ರತಿವಾದಿಗಳು :** 1. ಶ್ರೀ ಟಿ. ಎಂ. ರಮೇಶ್, ಕೇರಾಫ್ ಶ್ರೀ ಸತ್ಯನಾರಾಯಣ ಟ್ರಾನ್ಸ್ ಪೋರ್ಟ್, ಸೊಸೈಟಿ ರಸ್ತೆ, ಹಾಸನ
2. ದಿ ಮ್ಯಾನೇಜರ್, ದಿ ಯುನೈಟೆಡ್ ಇಂಡಿಯಾ ಇನ್ಶೂರೆನ್ಸ್ ಕಂ. ಲಿ., ವೆಂಕಟೇಶ್ವರ ಬಿಲ್ಡಿಂಗ್ ಬಿ. ಎಂ. ರಸ್ತೆ, ಹಾಸನ.

ಸಾರ್ವಜನಿಕರಿಗೆ ಮತ್ತು ಸಂಬಂಧಪಟ್ಟವರಿಗೆ ಈ ಮೂಲಕ ತಿಳಿಯಪಡಿಸುವುದೇನೆಂದರೆ, ಮೃತ ಜಯರಾಂ ರವರು ಪ್ರತಿವಾದಿಗಳಲ್ಲಿ ಕೆಲಸದ ಮೇಲಿದ್ದಾಗ ದಿನಾಂಕ: 26.10.2001 ರಂದು ಸಾವನ್ನಪ್ಪಿರುತ್ತಾರೆ ಎಂದು ಕಾರ್ಮಿಕ ನಷ್ಟ ಪರಿಹಾರವನ್ನು ಕೋರಿ ಮೇಲ್ಕಂಡ ಅವಲಂಬಿತರು ಈ ನ್ಯಾಯಾಲಯದಲ್ಲಿ ಅರ್ಜಿಯನ್ನು ಸಲ್ಲಿಸಿರುತ್ತಾರೆ.

ಈ ಪ್ರಕಟಣೆಯ ಮೂಲಕ ಸಾರ್ವಜನಿಕರಿಗೆ ಮತ್ತು ಸಂಬಂಧಪಟ್ಟವರಿಗೆ ತಿಳಿಸುವುದೇನೆಂದರೆ, ಈ ಬಗ್ಗೆ ಏನಾದರೂ ಆಕ್ಷೇಪಣೆಗಳಿದ್ದರೆ ಅಥವಾ ತಾವೇನಾದರೂ ಮೃತರ ನಿಜವಾದ ವಾರಸುದಾರರೆಂದು ಪರಿಗಣಿಸಬೇಕೆಂದು ಕೇಳಿಕೊಳ್ಳುವುದಾದರೆ ಅಂಥವರು ಈ ಪ್ರಕಟಣೆ ಕರ್ನಾಟಕ ರಾಜ್ಯಪತ್ರದಲ್ಲಿ ಪ್ರಕಟವಾದ 30 ದಿವಸದೊಳಗಾಗಿ ಆಕ್ಷೇಪಣೆಗಳಾಗಲೀ ಅಥವಾ ಅರ್ಜಿಗಳಾಗಲೀ ಯಾರಿಂದಲೂ ಬಾರದೆ ಇದ್ದಲ್ಲಿ ಮೇಲ್ಕಂಡ ಅರ್ಜಿದಾರರ ಅರ್ಜಿಯನ್ನೇ ವಿಚಾರಣೆಗೆ ತೆಗೆದುಕೊಳ್ಳಲಾಗುವುದು.

ಪಿ.ಆರ್. 425 ಕಾರ್ಮಿಕ ಅಧಿಕಾರಿ ಹಾಗೂ ಕಾರ್ಮಿಕ ನಷ್ಟ ಪರಿಹಾರ ಆಯುಕ್ತರು, ಹಾಸನ ಜಿಲ್ಲೆ, ಹಾಸನ.

**ಕಾರ್ಮಿಕ ಅಧಿಕಾರಿ ಹಾಗೂ ಕಾರ್ಮಿಕ ನಷ್ಟ ಪರಿಹಾರ ಆಯುಕ್ತರ ನ್ಯಾಯಾಲಯ, ಚಿತ್ರದುರ್ಗ ಜಿಲ್ಲೆ, ಚಿತ್ರದುರ್ಗ**

**ಪ್ರಕರಣ ಸಂ: ಕಾನಪ:ಪ್ರ:ಎಫ್:5/2004 ದಿನಾಂಕ: 10ನೇ ಮಾರ್ಚ್ 2004**

**ಅರ್ಜಿದಾರರು :** 1. ಶ್ರೀ ಮಹಬೂಬ್
2. ಶ್ರೀಮತಿ ಸಿರಾಜುನ್ನೀಸಾ ನಾಯ್ಕನಹಟ್ಟಿ ಗ್ರಾಮ ಚಳ್ಳಕೆರೆ ತಾ:

**ವಿರುದ್ಧ**

**ಪ್ರತಿವಾದಿಗಳು :** 1. ಎಂ. ಅಶ್ಯಾಂ ವಾಹನ ಮಾಲೀಕರು ನಾಯಕನ ಹಟ್ಟಿ
2. ನ್ಯೂ ಇಂಡಿಯಾ ಅಶೂರೆನ್ಸ್ ಕಂ. ಲಿ., ಚಿತ್ರದುರ್ಗ.

**ಪ್ರಕಟಣೆ**

ಅರ್ಜಿದಾರರಾದ ಶ್ರೀ:ಶ್ರೀಮತಿ 1) ಮಹಬೂಬ್ 2) ಸಿರಾಜುನ್ನೀಸಾ ಇವರು, ತಾವು ಮೃತ ಜಮೀರ್ ಮಹಬೂಬ್ ಇವರ ತಾಯಿ ಮತ್ತು ತಂದೆ ಎಂದೂ, ಅವರ ಮರಣದಿಂದ ನಷ್ಟ ಪರಿಹಾರ ಕೋರಿ ನ್ಯಾಯಾಲಯದಲ್ಲಿ ಅರ್ಜಿಸಲ್ಲಿಸಿರುತ್ತಾರೆ. ಮೃತ ಜಮೀರ್ ಮಹಬೂಬ್ ಇವರು ಒಂದನೇ ಪ್ರತಿವಾದಿಗಳಾದ ಎಂ. ಅಶ್ಯಾಂ ಇವರಲ್ಲಿ ಕ್ಲೀನರ್ ಆಗಿ ಕೆಲಸ ನಿರ್ವಹಿಸುತ್ತಿದ್ದಾಗ ಸಂಬಂಧಿಸಿದ ಅಪಘಾತದಲ್ಲಿ ಮರಣ ಹೊಂದಿದರೆಂದು, ಸದರಿ ಅರ್ಜಿದಾರರು ತಿಳಿಸಿರುತ್ತಾರೆ. ಈ ಸಂಬಂಧಿಸಿದ ಈ ಪ್ರಕಟಣೆಯ ಮೂಲಕ ಸಾರ್ವಜನಿಕರಿಗೆ ಮತ್ತು ಸಂಬಂಧಪಟ್ಟವರಿಗೆ ತಿಳಿಸುವುದೇನೆಂದರೆ, ಈ ಬಗ್ಗೆ ಏನಾದರೂ ಆಕ್ಷೇಪಣೆಗಳಾಗಲೀ ಅಥವಾ ಬೇರೆ ಯಾರಾದರೂ ಮೃತರ ಶಾಸನಬದ್ಧ ವಾರಸುದಾರರು ಎಂದು ಪರಿಗಣಿಸಬೇಕೆಂದು ಪ್ರಾರ್ಥಿಸುವುದಾದರೆ, ಅಂತಹವರು ಈ ಪ್ರಕಟಣೆಯು ಈ ನ್ಯಾಯಾಲಯದಲ್ಲಿ ನಾಮಫಲಕದಲ್ಲಿ ಪ್ರಕಟಿಸಿದ 30 ದಿನಗಳೊಳಗಾಗಿ ಅಂತಹ ಆಕ್ಷೇಪಣೆಗಳಾಗಲೀ ಅಥವಾ ಅರ್ಜಿಯನ್ನಾಗಲೀ ಈ ನ್ಯಾಯಾಲಯದಲ್ಲಿ ಸಲ್ಲಿಸತಕ್ಕದ್ದು. ಅವಧಿ ಮೀರಿ ಬಂದ ಅರ್ಜಿಗಳನ್ನು ಮಾನ್ಯ ಮಾಡಲಾಗುವುದಿಲ್ಲ.

**ಜಿ. ಗೋವಿಂದಯ್ಯ**

ಪಿ.ಆರ್. 426 ಕಾರ್ಮಿಕ ಅಧಿಕಾರಿ ಮತ್ತು ಕಾರ್ಮಿಕ ನಷ್ಟ ಪರಿಹಾರ ಆಯುಕ್ತರು,
ಚಿತ್ರದುರ್ಗ ಜಿಲ್ಲೆ, ಚಿತ್ರದುರ್ಗ.

**ಅಧಿಕೃತ ಅಧಿಕಾರಿಗಳು ಹಾಗೂ ಡೆಪ್ಯೂಟಿ ಕಮೀಷನರ್ ಆಫ್ ಎಕ್ಸೈಜ್, ಬೆಳಗಾಂವ ಜಿಲ್ಲೆ ಇವರ ನ್ಯಾಯಾಲಯದಲ್ಲಿ**

**ಪ್ರಕರಣ ಸಂಖ್ಯೆ :** ಪಿ.ಎಸ್.ಐ, ಹಿರೇಬಾಗೇವಾಡಿ ಪಿ.ಎಸ್. ಇವರ ಗುನ್ನೆ ಸಂ. 225/2001 ದಿನಾಂಕ: 03.11.2001

**ಆದೇಶ ಸಂಖ್ಯೆ :** ಇಎಕ್ಸ್ಇ:ಸಿಆರ್ಎಂ:ಡಿಟಿಸಿಆರ್:215:2001-02 ದಿನಾಂಕ: 26.2.2004

**ಉಪಸ್ಥಿತರು :** ಶ್ರೀ ಪಿ. ಎನ್. ಮುರಗೋಡ ಅಧಿಕೃತ ಅಧಿಕಾರಿಗಳು ಹಾಗೂ ಡೆಪ್ಯೂಟಿ ಕಮೀಷನರ್ ಆಫ್ ಎಕ್ಸೈಜ್ ಬೆಳಗಾಂವ ಜಿಲ್ಲೆ, ಬೆಳಗಾಂವ

**ಫಿರ್ಯಾದಿ :** ಶ್ರೀ ಬಿ. ಎ. ಮಠದ, ಪೊಲೀಸ್ ಸಬ್ ಇನ್ಸ್‌ಪೆಕ್ಟರ್, ಹಿರೇಬಾಗೇವಾಡಿ ಪಿ.ಎಸ್.

**ಆರೋಪಿತರು :**
1. ಅನಂತ ಯಲ್ಲಪ್ಪ ಕಾಜಳಕರ, ಸಾ: ಬಸವನ ಗಲ್ಲಿ, ಶಹಾಪೂರ - ಆರೋಪಿ
2. ಜ್ಯೋತಿಬಾ ತಾನಪ್ಪ ಮರವೆ, ಸಾ: ಬಸವನ ಗಲ್ಲಿ, ಶಹಾಪೂರ - ಆರೋಪಿ
3. ಬಸವರಾಜ ರಾಮಪ್ಪ ಚಾಟಗಿ, ಸಾ: ಶಗಣಮಟ್ಟಿ, - ಆರೋಪಿ
4. ಅರ್ಜುನ ಗಣಪತಸಾ ಶಿರಾಳಕರ, 130/ಸಿ, ಖಡೇಬಜಾರ, ಶಹಪೂರ, ಬೆಂಳಗಾಂವ - ವಾಹನ ಮಾಲಿಕರು

**ಪ್ರಸ್ತಾವನೆ:**

ದಿನಾಂಕ: 03.11.2001 ರಂದು ಈ ಪ್ರಕರಣದ ಫಿರ್ಯಾದಿಯಾದ ಶ್ರೀ ಬಿ.ಎ. ಮಠದ, ಪಿ.ಎಸ್.ಐ, ಹಿರೇಬಾಗೇವಾಡಿ ಪಿ. ಎಸ್. ಇವರು ಬೆಳಗಾಂವ ಕಡೆಯಿಂದ ಒಂದು ಮಾರುತಿ ವ್ಯಾನಿನಲ್ಲಿ ಸಾರಾಯಿ ತುಂಬಿದ ಬಾಟಲಿಗಳನ್ನು ಅಕ್ರಮವಾಗಿ ಸಾಗಾಟ ಮಾಡುತ್ತಾರೆ ಎಂಬ ಕುರಿತು ಖಾತ್ರಿದಾಯಕ ಬಾತ್ಮಿ ಬಂದ ಮೇರೆಗೆ ತಮ್ಮ ಸಿಬ್ಬಂದಿ ಹಾಗೂ ಇಬ್ಬರು ಪಂಚರೊಂದಿಗೆ ಮುಂಜಾನೆ 6.15ಕ್ಕೆ ಒಂದು ಖಾಸಗಿ ವಾಹನದಲ್ಲಿ ಪೂನಾ-ಬೆಂಗಳೂರು ರೋಡಿನ ಮೇಲೆ ಹಲಗಾ ಗ್ರಾಮದ ಹದ್ದಿನಲ್ಲಿ ತಾರಿಹಾಳ ಕ್ರಾಸ್ ಹತ್ತಿರ ಬಂದು ರಸ್ತೆ ಕಾವಲು ಮಾಡುತ್ತಿದ್ದಾಗ ಬೆಳಗಾಂವ ಕಡೆಯಿಂದ ಬಿಳಿಯ ಬಣ್ಣದ ಒಂದು ಮಾರುತಿ ವ್ಯಾನ್ ತಾರಿಹಾಳ ಕಡೆಗೆ ಹೋಗುತ್ತಿದ್ದನ್ನು ನಿಲ್ಲಿಸಿ ನೋಡಲಾಗಿದ ಅದರಲ್ಲಿ 3 ಜನರಿದ್ದರು. ಡ್ರೈವರ್‌ನ ಹೆಸರನ್ನು ಕೇಳಲಾಗಿ ಅವನು ತನ್ನ ಹೆಸರನ್ನು ಅನಂತ ಯಲ್ಲಪ್ಪ ಕಾಜಳಕರ ಎಂದು ಹೇಳಿದನು. ಅವನ ಬಾಜು ಕುಳಿತವನ ಹೆಸರನ್ನು ಕೇಳಲಾಗಿ ಅವನು ತನ್ನ ಹೆಸರನ್ನು ಜ್ಯೋತಿಬಾ ತಾನಪ್ಪ ಮರವೆ ಎಂದು ಹೇಳಿದನು. ಹಿಂದಿನ ಸೀಟಿನಲ್ಲಿ ಕುಳಿತವನ ಹೆಸರನ್ನು ಕೇಳಲಾಗಿ ಅವನು ತನ್ನ ಹೆಸರನ್ನು ಬಸವರಾಜ ರಾಮಪ್ಪ ಚೌಟಗಿ ಎಂದು ಹೇಳಿದನು. ವಾಹನವನ್ನು ತಪಾಸಿಸಲಾಗಿ ಹಿಂದಿನ ಡಿಕ್ಕಿಯಲ್ಲಿ 14 ರಟ್ಟಿನ ಪೆಟ್ಟಿಗೆಗಳಲ್ಲಿ ಪ್ರತಿಯೊಂದರಲ್ಲಿ 180 ಎಂ.ಎಲ್‌ದ ಬಾಟಲಿಗಳಂತೆ ಒಟ್ಟು 672 ಬಾಟಲು ಗೋಲ್ಡ್ ಫೆನ್ನಿವಿದ್ದುದು ಕಂಡು ಬಂದಿತು. ಸದರಿ ಫೆನ್ನಿಯನ್ನು ಸಾಗಿಸಲು ಪರ್ಮಿಟ್ ಅಥವಾ ಲೈಸೆನ್ಸ್ ಇದೆಯೋ ಎಂದು ಕೇಳಲಾಗಿ ಇಲ್ಲವೆಂದು ಹೇಳಿದನು. ಸದರಿ ಫೆನ್ನಿ ಎಲ್ಲಿಂದ ಎಲ್ಲಿಗೆ ಸಾಗಾಟವಾಗುತ್ತಿದೆ ಎಂದು ಕೇಳಲಾಗಿ ಅದಕ್ಕೆ ಅವನು ಸಮರ್ಪಕವಾದ ಉತ್ತರ ಹೇಳಲಿಲ್ಲ. ಸದರಿ ವಾಹನದ ಸಂಖ್ಯೆ ನೋಡಲಾಗಿ ಅದು ಕೆಎ-23-ಎಂ-305 ಇತ್ತು. ಆಗ ಸಮಯ ಮುಂಜಾನೆ 8.00 ಗಂಟೆಯಾಗಿತ್ತು. ಸದರಿ ಫೆನ್ನಿ ಅಕ್ರಮವಾಗಿ ಸಾಗಾಟ ಆಗುವುದು ಖಾತ್ರಿಯಾಗಿದ್ದರಿಂದ ಸದರಿ ಫೆನ್ನಿಗಳ ಬಾಟಲಿಗಳನ್ನು, ವಾಹನವನ್ನು ಹಾಗೂ ಆರೋಪಿತರನ್ನು ವಶಕ್ಕೆ ತೆಗೆದುಕೊಳ್ಳಲಾಯಿತು. ನಂತರ ಪ್ರತಿಯೊಂದು ಪೆಟ್ಟಿಗೆಯಿಂದ 2 ಬಾಟಲಿಗಳಂತೆ ಒಟ್ಟು 28 ಬಾಟಲಿಗಳನ್ನು ರಸಾಯನಿಕ ಪರೀಕ್ಷೆಗಾಗಿ ಮಾದರಿಗಳನ್ನು ತೆಗೆದುಕೊಳ್ಳಲಾಯಿತು. ಹಾಗೂ ಸದರಿಯವರ ಮತ್ತು ಪಂಚರ ಸಹಿ ಇರುವ ಚೀಟಿಗಳನ್ನು ಅಂಟಿಸಿ ಬಾಟಲುಗಳನ್ನು ಸೀಲು ಮಾಡಲಾಯಿತು ಎಂದು ತಿಳಿಸಿದ್ದಾರೆ. ಫೆನ್ನಿಯ ಹೆಸರನ್ನು ನೋಡಲಾಗಿ ಗೋಲ್ಡ್ ಫೆನ್ನಿ ಎಂದು ನಮೂದಾಗಿದ್ದಾಗಿ ತಿಳಿಸಿದ್ದಾರೆ. ನಂತರ ಕಛೇರಿಗೆ ಬಂದು ಸರಕಾರದ ಪರವಾಗಿ ಅವರೇ ಫಿರ್ಯಾದಿಯಾಗಿ ಆರೋಪಿತರ ವಿರುದ್ಧ ಅಬಕಾರಿ ಕಾಯ್ದೆ ಕಲಂ 32,34 ಮತ್ತು 38(ಎ) ಪ್ರಕಾರ ಫಿರ್ಯಾದನ್ನು ಸಲ್ಲಿಸಿ ಗುನ್ನೆ ನಂ. 225/2001 ದಿನಾಂಕ: 03.11.2001ನ್ನು ದಾಖಲಿಸಿದ್ದಾರೆ. ಹಾಗೂ ಪ್ರಕರಣವನ್ನು ವರ್ಗಾಯಿಸುವ ಬಗ್ಗೆ ಅಧಿಕೃತ ಅಧಿಕಾರಿಯವರಿಗೆ ವರದಿ ಸಲ್ಲಿಸಿರುತ್ತಾರೆ.

ನಂತರ ವಾಹನ ಮಾಲಿಕರು ತಮ್ಮ ವಕೀಲರಾದ ಶ್ರೀ ಬಿ. ಆರ್. ಕಾದ್ರೊಳ್ಳಿ, ಇವರ ಮುಖಾಂತರ ದಿನಾಂಕ: 07.02.2002 ರಂದು ವಕಾಲತನಾಮಾ ನೀಡಿರುತ್ತಾರೆ. ಹಾಗೂ ತಮ್ಮ ವಕೀಲರ ಮುಖಾಂತರ ಅರ್ಜಿಸಲ್ಲಿಸಿ ತಮ್ಮ ವಾಹನದಲ್ಲಿ ಫೆನ್ನಿಯ ಯಾವುದೇ ಅಕ್ರಮ ಸಾಗಾಟ ಆಗಿರುವುದಿಲ್ಲ ಎಂದು ತಿಳಿಸಿ ವಾಹನವನ್ನು ಬಿಡುಗಡೆ ಮಾಡಲು ವಿನಂತಿಸಿಕೊಂಡಿರುತ್ತಾರೆ.

ನಂತರ ಜಪ್ತಾದ ವಾಹನವನ್ನು ಹಾಗೂ ಫೆನ್ನಿಯನ್ನು ಸರಕಾರಕ್ಕೆ ಏಕೆ ಮುಟ್ಟುಗೋಲು ಹಾಕಿಕೊಳ್ಳಬಾರದೆಂದು ಕಾರಣ ಕೇಳಿ ಆರೋಪಿತರಿಗೆ ದಿನಾಂಕ: 7.2.2002 ರ ನೋಟೀಸನ್ನು ಕರ್ನಾಟಕ ಅಬಕಾರಿ ಕಾಯ್ದೆ ಕಲಂ 43(ಬಿ) ರೀತ್ಯ ನೀಡಲಾಯಿತು. ಸದರಿ ನೋಟೀಸಿಗೆ ಉತ್ತರ ಸಲ್ಲಿಸುತ್ತ ವಾಹನ ಮಾಲಿಕರು ತಮ್ಮ ಅರ್ಜಿ ದಿನಾಂಕ 28.2.02ನ್ನು ತಮ್ಮ ವಕೀಲರ ಮುಖಾಂತರ ಸಲ್ಲಿಸಿ ಸದರಿ ವಾಹನದಲ್ಲಿ ಫೆನ್ನಿಯನ್ನು ಸಾಗಾಟ ಮಾಡಿಲ್ಲವೆಂದು ತಿಳಿಸಿ, ಪೋಲಿಸರು ತಮ್ಮ ವಿರುದ್ಧ ಸುಳ್ಳು ಕೇಸು ಮಾಡಿರುವುದಾಗಿ ತಿಳಿಸಿ, ತಮಗೂ ಹಾಗೂ ಜಪ್ತಾದ ಫೆನ್ನಿಗೂ ಯಾವುದೇ ಸಂಬಂಧ ಇಲ್ಲವೆಂದು ತಿಳಿಸಿ, ವಾಹನವನ್ನು ಬಿಡುಗಡೆ ಮಾಡಲು ವಿನಂತಿಸಿಕೊಂಡಿದ್ದಾರೆ.

ರಸಾಯನ ತಜ್ಞರು ತಮ್ಮ ವರದಿ ಸಂ. ಸಿಸಿಎಲ್:6334:2001 ದಿನಾಂಕ: 30.11.2001 ರಲ್ಲಿ ಸದರಿ ಸ್ಯಾಂಪಲ್ ಬಾಟಲುಗಳಲ್ಲಿ ಮದ್ಯಸಾರದ ಅಂಶ ಇರುವುದಾಗಿಯೂ ಹಾಗೂ ಅವು ಮಾನವನ ಸೇವನೆಗೆ ಯೋಗ್ಯವಿರುವುದಾಗಿ ತಿಳಿಸಿದ್ದಾರೆ.

ಆರೋಪಿತರು ಜಪ್ತಿಯಾದ ಫೆನ್ನಿಗೆ ಹಾಗೂ ತಮಗೂ ಯಾವುದೇ ಸಂಬಂಧವಿಲ್ಲ ಎಂದು ತಿಳಿಸಿದ್ದರಿಂದ ಹಾಗೂ ರಸಾಯನ ತಜ್ಞರು ಸದರಿ ಫೆನ್ನಿ ಮಾನವನ ಸೇವನೆಗೆ ಯೋಗ್ಯವಾಗಿದೆ ಎಂದು ವರದಿಸಿರುವುದರಿಂದ ಈ ಪ್ರಕರಣದಲ್ಲಿ ಜಪ್ತಾದ ಒಟ್ಟು 120.960 ಲೀಟರ್ ಫೆನ್ನಿಯನ್ನು ಈ ಪ್ರಾಧಿಕಾರದ ಆದೇಶ ಸಂ. ಇಎಕ್ಸ್:ಸಿಆರ್‌ಎಂ:ಡಿಟಿಸಿಆರ್:215:01-02 ದಿನಾಂಕ: 28.02.2002 ರಲ್ಲಿ ಮುಟ್ಟುಗೋಲು ಹಾಕಿಕೊಳ್ಳಲಾಯಿತು. ಹಾಗೂ ರಸಾಯನಿಕ ಪರೀಕ್ಷೆಗಾಗಿ ತೆಗೆದ 5.040 ಲೀಟರ್ ಫೆನ್ನಿಯನ್ನು ಹೊರತುಪಡಿಸಿ ಉಳಿದ 115.920 ಲೀಟರ್ ಫೆನ್ನಿಯನ್ನು ಕಾನೂನು ಬದ್ಧವಾಗಿ ವಿಲೇವಾರಿ ಮಾಡಲು ಅಬಕಾರಿ ಇನ್ಸ್‌ಸ್ಪೆಕ್ಟರ್, ದಕ್ಷಿಣ ವಲಯ, ಬೆಳಗಾಂವ ಇವರಿಗೆ ಆದೇಶಿಸಲಾಯಿತು.

ಸದರಿ ವಾಹನವನ್ನು ತಮ್ಮ ವಶಕ್ಕೆ ಬಿಡುಗಡೆ ಮಾಡಬೇಕೆಂದು ಆರೋಪಿತರು ಸಲ್ಲಿಸಿದ ಅರ್ಜಿಯನ್ನು ಕೂಲಂಕುಷವಾಗಿ ಪರಿಶೀಲಿಸಲಾಯಿತು. ಆದರೆ ಸದರಿ ವಾಹನವನ್ನು ಮಧ್ಯಂತರ ವಶಕ್ಕೆ ಬಿಡುಗಡೆ ಮಾಡಿದಲ್ಲಿ ಅದನ್ನು ಮತ್ತೆ ಇಂತಹದೇ ಕೃತ್ಯಕ್ಕೆ ಉಪಯೋಗಿಸುವ ಸಾಧ್ಯತೆಗಳು ಇರುವುದರಿಂದ ಅಥವಾ ಅದರ ಬಣ್ಣ, ಆಕಾರ ಮುಂತಾದವುಗಳನ್ನು ಬದಲಾವಣೆ ಮಾಡುವ ಸಾಧ್ಯತೆ ಇರುವುದರಿಂದ ಅಥವಾ ಅದನ್ನು ಮಾರಾಟ ಮಾಡುವ ಸಾಧ್ಯತೆ ಇರುವುದರಿಂದ ಅದನ್ನು ಮಧ್ಯಂತರ ವಶಕ್ಕೆ ಬಿಡುಗಡೆ ಮಾಡುವುದು

ನ್ಯಾಯ ಸಮ್ಮತವಲ್ಲ ಎಂದು ನಿರ್ಧರಿಸಿ ಈ ಪ್ರಾಧಿಕಾರದ ಆದೇಶ ಸಂ. ಇಎಕ್ಸ್‌ಇ:ಡಿಟಿಸಿಆರ್:215:2001-02 ದಿನಾಂಕ: 22.5.2002 ರಲ್ಲಿ ಸದರಿ ಆರೋಪಿತರ ಅರ್ಜಿಯನ್ನು ತಿರಸ್ಕರಿಸಲಾಯಿತು.

ಈ ಪ್ರಾಧಿಕಾರದ ಮೇಲೆ ನಮೂದಿಸಿದ ದಿನಾಂಕ: 22.05.2002 ರ ಆದೇಶವನ್ನು ಪ್ರಶ್ನಿಸಿ ಆರೋಪಿತರು ಮಾನ್ಯ 1ನೇ ಅ್ಯಡಿಶನಲ್ ಸೆಶನ್ ಜಡ್ಜ್, ಬೆಳಗಾಂವ ಇವರ ನ್ಯಾಯಾಲಯದಲ್ಲಿ ಕ್ರಿಮಿನಲ್ ಅಪೀಲ್ ನಂ. 60/2002ನ್ನು ದಾಖಲಿಸಿದ್ದರು. ಸದರಿ ನ್ಯಾಯಾಲಯವು ಈ ಅರ್ಜಿಯಲ್ಲಿ ವಿಚಾರಣೆ ನಡೆಸಿ ದಿನಾಂಕ: 17.09.2002 ರ ತನ್ನ ಆದೇಶವನ್ನು ನೀಡಿ ಈ ಪ್ರಾಧಿಕಾರದ ದಿನಾಂಕ: 22.05.2002ರ ಆದೇಶವನ್ನು ರದ್ದುಪಡಿಸಿ ಅರ್ಜಿದಾರರು ಈ ಪ್ರಾಧಿಕಾರಕ್ಕೆ ಬ್ಯಾಂಕ್ ಗ್ಯಾರಂಟಿಯನ್ನು ಸಲ್ಲಿಸುವ ಹಾಗೂ ಇತರೆ ಷರತ್ತನ್ನು ವಿಧಿಸಿ ವಾಹನವನ್ನು ವಾಹನ ಮಾಲೀಕರ ಮಧ್ಯಂತರ ವಶಕ್ಕೆ ಬಿಡುಗಡೆ ಮಾಡಲು ಆದೇಶಿಸಿತು. ಆದರೆ ಸದರಿ ತೀರ್ಪಿನ ಅನ್ವಯ ವಾಹನ ಮಾಲಿಕರು ಈ ಪ್ರಾಧಿಕಾರದ ಮುಂದೆ ಹಾಜರಾಗಲಿಲ್ಲ ಹಾಗೂ ಸದರಿ ವಾಹನವನ್ನು ತಮ್ಮ ಮಧ್ಯಂತರ ವಶಕ್ಕೆ ಬಿಡುಗಡೆ ಮಾಡುವಂತೆ ಈ ಪ್ರಾಧಿಕಾರಕ್ಕೆ ಯಾವುದೇ ಅರ್ಜಿಯನ್ನು ಸಲ್ಲಿಸಿರುವುದಿಲ್ಲ.

ನಂತರ ಪ್ರಕರಣದ ವಿಚಾರಣೆಯನ್ನು ಪ್ರಾರಂಭಿಸಿ ಸರಕಾರದ ಪರವಾಗಿ ಫಿರ್ಯಾದಿ, ತನಿಖಾಧಿಕಾರಿ ಹಾಗೂ ಇಬ್ಬರು ಪಂಚರ ಹೇಳಿಕೆಯನ್ನು ಪಡೆಯಲಾಗಿದೆ ಹಾಗೂ 8 ದಾಖಲೆಗಳನ್ನು ಮತ್ತು 2 ಮುದ್ದೆ ಮಾಲುಗಳನ್ನು ಗುರುತಿಸಲಾಗಿದೆ.

ಈ ಪ್ರಕರಣದಲ್ಲಿ ಸರ್ಕಾರದ ಪರವಾಗಿ ಒದಗಿಸಿರುವ ಸಾಕ್ಷ್ಯಾಧಾರಗಳಿಂದ ಈ ಕೆಳಗಿನ ವಿವಾದಾಂಶಗಳನ್ನು ತೀರ್ಮಾನಿಸ ಬೇಕಾಗಿರುವುದು ಅಗತ್ಯವಾಗಿರುವುದರಿಂದ ಪರಿಶೀಲನಾಂಶಗಳು ಈ ಕೆಳಗಿನಂತಿರುತ್ತವೆ.

1. ದಿನಾಂಕ: 3.11.2001 ರಂದು ವಾಹನ ಮಾರುತಿ ವ್ಯಾನ್ ಸಂ:ಕೆಎ-23-ಎಂ-305 ರಲ್ಲಿ ಫೆನ್ನಿಯನ್ನು ಅಕ್ರಮವಾಗಿ ಸಾಗಾಟ ಮಾಡಲಾಗಿದೆಯೇ?
2. ಸದರಿ ವಾಹನದಲ್ಲಿ ಫೆನ್ನಿಯ ಸಾಗಾಟವನ್ನು ತಮ್ಮ ತಿಳುವಳಿಕೆಗೆ ಬಾರದಂತೆ ಮಾಡಲಾಗಿತ್ತು ಎಂದು ವಾಹನ ಮಾಲಿಕರು ಸಿದ್ದಪಡಿಸಿದ್ದಾರೆಯೇ?
3. ಜಪ್ತಾದ ವಾಹನವನ್ನು ಸರ್ಕಾರಕ್ಕೆ ಮುಟ್ಟುಗೋಲು ಹಾಕಿಕೊಳ್ಳಬಹುದೆ?

ಈ ಮೇಲೆ ತಿಳಿಸಿದ ಪರಿಶೀಲನಾಂಶಗಳನ್ನು ಲಭ್ಯವಿರುವ ಸಾಕ್ಷ್ಯಾಧಾರದ ಮೇಲೆ ಈ ಕೆಳಗಿನಂತೆ ಉತ್ತರಿಸಿರುತ್ತೇನೆ.

ಒಂದನೆಯ ಅಂಶವನ್ನು ಗುಣಾತ್ಮಕವಾಗಿ, ಎರಡನೆಯ ಅಂಶವನ್ನು ನಕಾರಾತ್ಮಕವಾಗಿ ಹಾಗೂ ಮೂರನೆಯ ಅಂಶವನ್ನು ಕೊನೆಯ ಆದೇಶದಂತೆ.

ಶ್ರೀ ಬಿ. ಎ. ಮಠದ, ಪೊಲೀಸ್ ಸಬ್ ಇನ್‌ಸ್ಪೆಕ್ಟರ್, ಹಿರೇಬಾಗೇವಾಡಿ ಪಿ.ಎಸ್. ಇವರು ಈ ಪ್ರಕರಣದಲ್ಲಿ ಫಿರ್ಯಾದಿಯಾಗಿದ್ದು, ಸದರಿಯವರು ದಿನಾಂಕ: 24.07.2003 ರಂದು ಈ ಪ್ರಾಧಿಕಾರದ ಮುಂದೆ ಹಾಜರಾಗಿರುತ್ತಾರೆ. ಅವರ ತಮ್ಮ ಹೇಳಿಕೆಯನ್ನು ಪ್ರಾ.ಸಾ-1 ಆಗಿ ಪಡೆಯಲಾಯಿತು. ಸದರಿಯವರು ದಿನಾಂಕ: 23.07.2001 ರಿಂದ ಹಿರೇಬಾಗೇವಾಡಿ ಪಿ.ಎಸ್.ದಲ್ಲಿ ಪಿ.ಎಸ್.ಐ ಅಂತಾ ಕೆಲಸ ನಿರ್ವಹಿಸುತ್ತಿರುವುದಾಗಿ ತಿಳಿಸಿದ್ದಾರೆ. ದಿನಾಂಕ: 3.11.2001 ರಂದು ಪೂನಾ-ಬೆಂಗಳೂರು ರಾಷ್ಟ್ರೀಯ ಹೆದ್ದಾರಿ ನಂ.4 ರ ಹಲಗಾ ಗ್ರಾಮದ ಹದ್ದಿನಲ್ಲಿ ತಾರಿಹಾಳ ಕ್ರಾಸ್ ಹತ್ತಿರ ರಸ್ತೆ ಕಾವಲು ಮಾಡುತ್ತಿದ್ದಾಗ ಮಾರುತಿ ವ್ಯಾನ್ ನಂ. ಕೆಎ-23-ಎಂ-305 ಬಂದಿದ್ದಾಗಿಯೂ ಅದನ್ನು ನಿಲ್ಲಿಸಿ ತಪಾಸಣೆ ಮಾಡಲಾಗಿ ಸದರಿ ವಾಹನದಲ್ಲಿ ಯಾವುದೇ ಅಧಿಕೃತ ಪರವಾನಗಿ ಪತ್ರ ಪಡೆಯದೇ 14 ರಟ್ಟಿನ ಪೆಟ್ಟಿಗೆಗಳು ಪ್ರತಿಯೊಂದರಲ್ಲಿ 180 ಎಂ.ಎಲ್ X 48 ರಂತೆ 672 ಗೋಲ್ಡ್ ಫೆನ್ನಿ ಬಾಟಲುಗಳನ್ನು ಅಕ್ರಮವಾಗಿ ಸಾಗಾಟ ಮಾಡುತ್ತಿದ್ದುದು ಖಚಿತವಾಯಿತು ಎಂದು ತಿಳಿಸಿದ್ದಾರೆ. ವಾಹನದಲ್ಲಿದ್ದವರ ಹೆಸರನ್ನು ಕೇಳಲಾಗಿ ಒಬ್ಬನು ಅನಂತ ಯಲ್ಲಪ್ಪ ಕಾಜಳಕರ ಎಂತಲೂ ಎರಡನೆಯವನು ತನ್ನ ಹೆಸರನ್ನು ಜ್ಯೋತಿಬಾ ತಾನಪ್ಪ ಮೊರವೆ ಎಂತಲೂ ಮತ್ತು ಮೂರನೆಯವನು ತನ್ನ ಹೆಸರನ್ನು ಬಸವರಾಜ ರಾಮಪ್ಪ ಚವಟಗಿ ಎಂದು ಹೇಳಿದ್ದಾಗಿ ತಿಳಿಸಿದ್ದಾರೆ. ಸದರಿಯವರಿಗೆ ಮಾಲಿನ ಬಗ್ಗೆ ಕಾಗದ ಪತ್ರಗಳು ಇವೆಯೋ ಎಂದು ಕೇಳಲಾಗಿ ಅವರು ಇಲ್ಲ ಎಂದದ್ದಾಗಿ ತಿಳಿಸಿದ್ದಾರೆ. ನಂತರ ಪಂಚರಿಗೆ ಕರೆಯಿಸಿ ಮೇಲೆ ನಮೂದಾದ ಎಲ್ಲ ಗೋಲ್ಡ್ ಫೆನ್ನಿ ಬಾಟಲುಗಳನ್ನು ಪಂಚನಾಮೆಯ ಅಡಿಯಲ್ಲಿ ಜಪ್ತ ಮಾಡಿದ್ದಾಗಿ ಹೇಳಿದ್ದಾರೆ. ಹಾಗೂ ಅವುಗಳ ಪೈಕಿ ಪ್ರತಿಯೊಂದು ಪೆಟ್ಟಿಗೆಯಲ್ಲಿ 2 ರಂತೆ ಒಟ್ಟು 28 ಬಾಟಲುಗಳನ್ನು ಸ್ಯಾಂಪಲ್ ತೆಗೆದು ಸೀಲು ಮಾಡಿ ತಾಬಾಕ್ಕೆ ತೆಗೆದುಕೊಂಡಿದ್ದಾಗಿ ತಿಳಿಸಿದ್ದಾರೆ. ಅದರಂತೆ ವಾಹನವನ್ನು ಸಹ ಜಪ್ತಿ ಮಾಡಿ ತಾಬಾಕ್ಕೆ ತೆಗೆದುಕೊಂಡಿದ್ದಾಗಿ ಹೇಳಿದ್ದಾರೆ. ಈ ಕುರಿತು ನಂತರ ಪಂಚನಾಮೆ ಬರೆದಿದ್ದಾಗಿ ತಿಳಿಸಿದ್ದಾರೆ. ಸದರಿ ಪಂಚನಾಮೆಯ ನಕಲನ್ನು ನಿಪಿ-1 ಎಂದು ಹಾಗೂ ಅದರ ಮೇಲಿನ ಅವರ ಸಹಿಯನ್ನು ನಿಪಿ-1(ಅ) ಎಂದು ಗುರುತಿಸಲಾಗಿದೆ. ನಂತರ ಠಾಣೆಗೆ ಹೋಗಿ ಸರಕಾರದ ಪರ ಫಿರ್ಯಾದನ್ನು ಬರೆದು ಗುನ್ಹೆ ನಂ. 225/2001 ದಿನಾಂಕ: 03.11.2001ನ್ನು ದಾಖಲಿಸಿಕೊಂಡು ಪ್ರಥಮ ವರ್ತಮಾನ ವರದಿಯನ್ನು ಮಾನ್ಯ ನ್ಯಾಯಾಲಯಕ್ಕೆ ಸಲ್ಲಿಸಿದ್ದಾಗಿ ತಿಳಿಸಿದ್ದಾರೆ. ಫಿರ್ಯಾದನ್ನು ನಿಪಿ-2 ಎಂತಲೂ ಹಾಗೂ ಅದರ ಮೇಲಿನ ಅವರ ಸಹಿಯನ್ನು ನಿಪಿ-2(ಅ) ಎಂದು ಗುರುತಿಸಲಾಗಿದೆ. ಪ್ರಥಮ ವರ್ತಮಾನ ವರದಿಯನ್ನು ನಿಪಿ-3 ಎಂತಲೂ ಹಾಗೂ ಅದರ ಮೇಲಿನ ಅವರ ಸಹಿಯನ್ನು ನಿಪಿ-3(ಅ) ಎಂತಲೂ ಗುರುತಿಸಲಾಗಿದೆ. ಮಾನ್ಯ ನ್ಯಾಯಾಲಯಕ್ಕೆ ಸ್ವತ್ತಿನ ಪಟ್ಟಿಯನ್ನು ಸಲ್ಲಿಸಿದ್ದು, ಅದರ ಪ್ರತಿಯನ್ನು ನಿಪಿ-4 ಹಾಗೂ ಅದರ ಮೇಲಿನ ಅವರ ಸಹಿಯನ್ನು ನಿಪಿ-4(ಅ) ಎಂತಲೂ ಗುರುತಿಸಲಾಗಿದೆ. ನಂತರ ಮಾನ್ಯ ನ್ಯಾಯಾಲಯದಿಂದ ಅನುಮತಿ ಪಡೆದು ವಾಹನ ಹಾಗೂ ಸ್ಯಾಂಪಲ್ ಕುರಿತು ತೆಗೆದ 28 ಬಾಟಲುಗಳನ್ನು ಈ ಪ್ರಾಧಿಕಾರಕ್ಕೆ ಮುಟ್ಟುಗೋಲು ಹಾಕುವ ಕ್ರಮಕ್ಕಾಗಿ ಸಲ್ಲಿಸಿದ್ದಾಗಿ ಹೇಳಿದ್ದಾರೆ. ಹಾಗೂ ಈ ಪ್ರಾಧಿಕಾರಕ್ಕೆ ಜಪ್ತಾದ ಮುದ್ದೆಮಾಲುಗಳನ್ನು ಮುಂದಿನ ಕ್ರಮಕ್ಕಾಗಿ ವಹಿಸಲು ವರದಿ ಸಲ್ಲಿಸಿರುತ್ತಾರೆ. ಸದರಿ ವರದಿಯನ್ನು ನಿಪಿ-5 ಎಂತಲೂ ಅದರ ಮೇಲಿನ ಅವರ ಸಹಿಯನ್ನು ನಿಪಿ-5(ಅ) ಎಂತಲೂ ಗುರುತಿಸಲಾಗಿದೆ. ಜಪ್ತಾದ ವಾಹನವನ್ನು ನೋಡಿದರೆ ಗುರುತಿಸುವುದಾಗಿ ತಿಳಿಸಿರುತ್ತಾರೆ. ಈಗ ಅದನ್ನು ನೋಡುತ್ತಿದ್ದು, ಅದನ್ನು ಮುದ್ದೆ ಮಾಲು-1 ಎಂದು ಗುರುತಿಸಲಾಗಿದೆ. ನಂತರ ಸದರಿ ಫೆನ್ನಿಯನ್ನು ಹಾಗೂ ವಾಹನವನ್ನು ಸರಕಾರಕ್ಕೆ ಮುಟ್ಟುಗೋಲು ಹಾಕಿಕೊಳ್ಳಲು ವಿನಂತಿಸಿದ್ದಾರೆ.

ನಂತರ ಸದರಿಯವರು ವಾಹನ ಮಾಲಿಕರ ಪರ ವಕೀಲರಾದ ಶ್ರೀ ಬಿ.ಆರ್. ಕಾದ್ರೊಳ್ಳಿ ಇವರ ಪಾಟೀ ಸವಾಲಿಗೆ ಉತ್ತರಿಸುತ್ತ ತಾರಿಹಾಳ ಕ್ರಾಸ್ ಬಾಗೇವಾಡಿಯಿಂದ 15 ಕಿ.ಮೀ. ದೂರದಲ್ಲಿದೆ ಎಂದು ಸದರಿಯವರಿಗೆ ಪ್ರಥಮ ವರ್ತಮಾನ ಮುಂಜಾನೆ 6.15 ಗಂಟೆಗೆ ಸಿಕ್ಕಿದ್ದಾಗಿಯೂ ಹಾಗೂ ದಾಳಿಗೆ ಹೊರಡಬೇಕಾದರೆ 6.20 ಆಗಿದ್ದಾಗಿ ತಿಳಿಸಿದ್ದಾರೆ. ಸದರಿಯರಿಗೆ ಪ್ರಥಮ ವರ್ತಮಾನ ಸಿಕ್ಕಾಗ ಕೇಸ್ ಡೈರಿಯಲ್ಲಿ ನಮೂದು ಮಾಡಿದ್ದಾಗಿ ತಿಳಿಸಿದ್ದಾರೆ. ಸದರಿಯವರು ಒಟ್ಟು 7 ಜನರಿದ್ದು, ಖಾಸಗಿ ವಾಹನದಲ್ಲಿ ಹೋಗಿದ್ದಾಗಿ ತಿಳಿಸಿದ್ದಾರೆ. ಆಗ ಸದರಿಯವರು ತಾರಿಹಾಳ ಕ್ರಾಸ್‌ಗೆ ಹೋಗುವಷ್ಟರಲ್ಲಿ ಬೆಳಗಾಂವ ಕಡೆಯಿಂದ ಒಂದು ಮಾರುತಿ ವ್ಯಾನ್ ಬಂದಿದ್ದಾಗಿಯೂ ಅದನ್ನು ನಿಲ್ಲಿಸಿ ಶೋಧಿಸಿದಾಗ ಅದರಲ್ಲಿ ಫೆನ್ನಿಯನ್ನು ನೋಡಿ ನಂತರ ಪಂಚರನ್ನು ಬರಮಾಡಿಕೊಳ್ಳಲು ತಮ್ಮ ಖಾಸಗಿ ವಾಹನವನ್ನು ಬಾಗೇವಾಡಿಗೆ ಕಳುಹಿಸಿಕೊಟ್ಟು ಪಂಚರನ್ನು ಅದೇ ಜೀಪಿನಿಂದ ಕರೆಯಿಸಿದ್ದಾಗಿ ಹೇಳಿದ್ದಾರೆ. ಆ ಪಂಚರು ಬಂದಾಗ ಮುಂಜಾನೆ 8.00 ಗಂಟೆಯ ಸಮಯ ಆಗಿತ್ತು ಎಂದು ತಿಳಿಸಿದ್ದಾರೆ. ತಾರಿಹಾಳ ಬಸ್‌ಸ್ಟ್ಯಾಂಡ್‌ದಿಂದ ಹಲಗಾ ಬಸ್‌ಸ್ಟ್ಯಾಂಡ್ ಅರ್ಧ ಕಿ.ಮೀ. ಅಂತರದಲ್ಲಿದೆ ಹಾಗೂ ಹಲಗಾ ಬಸ್‌ಸ್ಟಾಪಿನ ಮೇಲೆ ಒಂದು ಚಹದ ಅಂಗಡಿ ಇದ್ದುದಾಗಿಯೂ ಆದರೆ ಅಲ್ಲಿ ಯಾರೂ ಪಂಚರು ಸಿಗಲಿಲ್ಲ ಎಂದು ತಿಳಿಸಿದ್ದಾರೆ. ಅದೇ ರೀತಿಯಾಗಿ ಹಲಗಾ ಊರಿನವರು ಯಾರೂ ಪಂಚರಾಗಲು ಒಪ್ಪಲಿಲ್ಲ ಎಂದು ಹೇಳಿದ್ದಾರೆ. ತಾರಿಹಾಳ ಕ್ರಾಸಿನಲ್ಲಿ ಒಂದು ಮನೆ ಇದ್ದು ಆ ಮನೆಯಲ್ಲಿ ಹೆಂಗಸರು ಮಾತ್ರ ಇದ್ದುದಾಗಿ ತಿಳಿಸಿದ್ದಾರೆ. ನ್ಯಾಯಿಕ ದಂಡಾಧಿಕಾರಿಗಳಿಂದ ಶೋಧ ಮಾಡಲು ವಾರಂಟನ್ನು ತರಿಸುವ ಕುರಿತು ಸದರಿಯವರ ಸಿಬ್ಬಂದಿಗೆ ಕಳಿಸಿರುವುದಿಲ್ಲ ಎಂದೂ ಹಾಗೂ ಪಿ.ಸಿ. 1078, 985, 1372 ಹಾಗೂ 2460 ರವರಿಗೆ ಸಹ ದಂಡಾಧಿಕಾರಿಗಳ ಬಳಿ ಶೋಧ ಮಾಡಲು ವಾರಂಟ್ ಪಡೆಯಲು ಕಳುಹಿಸಿರುವುದಿಲ್ಲ ಎಂದು ತಿಳಿಸಿದ್ದಾರೆ. ಶೋಧ ವಾರೆಂಟ್‌ದ ಅವಶ್ಯಕತೆ ಇರಲಿಲ್ಲವೆಂದು ಅದನ್ನು ಪಡೆದಿರುವುದಿಲ್ಲವೆಂದು ತಿಳಿಸಿರುತ್ತಾರೆ. ಹಾಗೂ ಅದನ್ನು ಫಿರ್ಯಾದಿನಲ್ಲಾಗಲೀ ಅಥವಾ ಪಂಚನಾಮೆಯಲ್ಲಾಗಲೀ ನಮೂದು ಮಾಡಿಲ್ಲ ಎಂದು ತಿಳಿಸಿದ್ದಾರೆ. ತಾವು ಗುನ್ನಾ ಸ್ಥಳಕ್ಕೆ ಹೋಗಿಲ್ಲ ಎನ್ನುವುದು ಸರಿಯಲ್ಲ ಎಂದು ತಿಳಿಸಿದ್ದಾರೆ. ಪಂಚನಾಮೆಯನ್ನು ಬರೆದಿರುವ ಅಧಿಕಾರಿಯ ದಸ್ತೂರ ಅದರಲ್ಲಿ ಇರುವುದಿಲ್ಲ ಎಂದು ಹೇಳಿದ್ದಾರೆ. ಪಂಚನಾಮೆಯನ್ನು ಸ್ಥಳದಲ್ಲಿಯೇ ಬರೆದಿದ್ದಾಗಿಯೂ ಆದರೆ ಫಿರ್ಯಾದಿಯ ಮೇಲೆ ಅದನ್ನು ಬರೆದವರ ದಸ್ತೂರ ಇರುವುದಿಲ್ಲ ಎಂದು ಹೇಳಿದ್ದಾರೆ. ಫಿರ್ಯಾದು ಹಾಗೂ ಪಂಚನಾಮೆಯನ್ನು ಬರೆದವರ ಹೇಳಿಕೆಯನ್ನು ಪಡೆದಿಲ್ಲ ಎಂದು ಹೇಳಿದ್ದಾರೆ. ಅದರಂತೆಯೇ ಖಾಸಗಿ ವಾಹನ ಚಾಲಕನ ಹೇಳಿಕೆಯನ್ನು ಸಹ ಪಡೆದಿರುವುದಿಲ್ಲ ಎಂದು ಹೇಳಿದ್ದಾರೆ. ಅದರಂತೆಯೇ ತಾರಿಹಾಳ ಕ್ರಾಸ್‌ನಲ್ಲಿ ಪ್ರತ್ಯಕ್ಷದರ್ಶಿಗಳ ಹೇಳಿಕೆಯನ್ನು ಸಹ ಪಡೆದಿರುವುದಿಲ್ಲ ಎಂದು ಹೇಳಿದ್ದಾರೆ. ಫಿರ್ಯಾದನ್ನು ಹಾಗೂ ಪಂಚನಾಮೆಯನ್ನು ಅನುಕೂಲಕ್ಕೆ ತಕ್ಕಂತೆ ಠಾಣೆಯಲ್ಲಿ ಬರೆಯಲಾಗಿದೆ ಎಂದರೆ ಸರಿಯಲ್ಲ ಎಂದು ಹೇಳಿದ್ದಾರೆ. ಸ್ವತ್ತಿನ ಪಟ್ಟಿಯನ್ನು ಅಧಿಕೃತ ಅಧಿಕಾರಿಗಳಿಗೆ ದಿನಾಂಕ: 7.11.2001 ರಂದು ಸಲ್ಲಿಸಿದ್ದಾಗಿ ತಿಳಿಸಿದ್ದಾರೆ. ಮಾನ್ಯ ನ್ಯಾಯಾಲಯದಿಂದ ಅನುಮತಿಯನ್ನು ಪಡೆಯಲು ನಾಲ್ಕು ದಿನ ತಡವಾಗಿದೆ ಎಂದು ಹೇಳಿದ್ದಾರೆ. ಅದಕ್ಕೆ ಕಾರಣಗಳನ್ನು ಪಿ.ಎಫ್‌ದಲ್ಲಿ ನಮೂದು ಮಾಡಿರುವುದಿಲ್ಲ ಎಂದು ಹೇಳಿದ್ದಾರೆ. ಸದರಿಯವರು ತಾನು ಪಿ.ಸಿ.1078, 985, 1372, 2460 ಹಾಗೂ ಓ.ಎ.ಎಸ್.ಪಿ. ಅಂಬೋಜಿ ಇವರ ಹೇಳಿಕೆಗಳನ್ನು ಪಡೆದಿದ್ದಾಗಿ ತಿಳಿಸಿದ್ದಾರೆ. ಸದರಿಯವರು ತಾನು ಮಾರುತಿ ವ್ಯಾನ್ ನಂ. ಕೆಎ-23-305 ನ್ನು ತಡೆದಿರುವುದಿಲ್ಲವೆಂದರೆ ಮತ್ತು ಅದರಲ್ಲಿ ಫೆನ್ನಿ ಸಿಕ್ಕಿರುವುದಿಲ್ಲವೆಂದು ಹೇಳುವುದು ಸರಿಯಲ್ಲ ಎಂದು ಹೇಳಿದ್ದಾರೆ. ಸದರಿಯವರು ತಮ್ಮ ಮೇಲಾಧಿಕಾರಿಗಳ ಮಾತು ಕೇಳಿ ಹಾಗೂ ಅನಧಿಕೃತ ಫೆನ್ನಿಯನ್ನು ವಿಲೇ ಮಾಡಲು ಮತ್ತು ವಾರಸುದಾರರಿಲ್ಲದೆ ಫೆನ್ನಿಯನ್ನು ವಿಲೇವಾರಿ ಮಾಡಲು ಸುಳ್ಳು ಪ್ರಕರಣವನ್ನು ತಯಾರಿಸಿದ್ದೇವೆ ಎನ್ನುವುದು ಸರಿಯಲ್ಲ ಎಂದು ಹೇಳಿದ್ದಾರೆ.

ನಂತರ ಶ್ರೀ ಕಲ್ಲಪ್ಪ ಯಲ್ಲಪ್ಪ ನಾವಲಗಟ್ಟಿ, ಹಿರೇಬಾಗೇವಾಡಿ ಪಂಚರು ಇವರ ಹೇಳಿಕೆಯನ್ನು ಪ್ರಾ.ಸಾ-2 ಆಗಿ ಪಡೆಯಲಾಯಿತು. ಸದರಿಯವರು ಈ ಪ್ರಾಧಿಕಾರದ ಮುಂದೆ ದಿನಾಂಕ: 24.07.2003 ರಂದು ಹಾಜರಾಗಿ ತಮ್ಮ ಹೇಳಿಕೆಯನ್ನು ನೀಡುತ್ತ ದಿನಾಂಕ: 3.11.2001 ರಂದು ಅವರ ಸಮಕ್ಷಮದಲ್ಲಿ ತಾರಿಹಾಳ ಕ್ರಾಸ್ ಹತ್ತಿರ ಮಾರುತಿ ವ್ಯಾನ್ ನಿಲ್ಲಿಸಿರುವುದಿಲ್ಲ ಎಂತಲೂ ಅದನ್ನು ತಪಾಸಣೆ ಮಾಡಿರುವುದಿಲ್ಲವೆಂತಲೂ ಮತ್ತು ಅದರಲ್ಲಿ ಅನಧಿಕೃತ ಫೆನ್ನಿಯನ್ನು ಜಪ್ತಿ ಮಾಡಿರುವುದಿಲ್ಲವೆಂತಲೂ ಹಾಗೂ ಅವರ ಸಮಕ್ಷಮದಲ್ಲಿ ಯಾವುದೇ ಪಂಚನಾಮೆಯನ್ನು ಮಾಡಿರುವುದಿಲ್ಲವೆಂದು ಹೇಳಿದ್ದಾರೆ. ಸದರಿಯವರು ಆರಕ್ಷಕ ಠಾಣೆಯಲ್ಲಿ ನಿಪಿ-1 ರ ಮೇಲೆ ಸಹಿ ಮಾಡಿದ್ದಾಗಿಯೂ ಹಾಗೂ ಈ ಪ್ರಕರಣದ ಕುರಿತು ಸದರಿಯವರಿಗೆ ಯಾವುದೇ ಮಾಹಿತಿ ಇರುವುದಿಲ್ಲವೆಂದು ಹೇಳಿದ್ದಾರೆ.

ನಂತರ ಸದರಿಯವರು ಸಹಾಯಕ ಅಭಿಯೋಗ ನಿರ್ದೇಶಕರ ಪಾಟೀ ಸವಾಲಿಗೆ ಉತ್ತರಿಸುತ್ತ ಸದರಿಯವರು ದಿನಾಂಕ: 03.11.2001 ರಂದು ಹಲಗಾ ಗ್ರಾಮದ ಹದ್ದಿನಲ್ಲಿ ತಾರಿಹಾಳ ಕ್ರಾಸ್ ಹತ್ತಿರ ಪೋಲೀಸರು ಸದರಿಯವರ ಸಮಕ್ಷಮದಲ್ಲಿ ಒಂದು ಮಾರುತಿ ವ್ಯಾನ್ ಮತ್ತು ಅದರಲ್ಲಿರುವ ಫೆನ್ನಿಯನ್ನು ಸದರಿಯವರ ಸಮಕ್ಷಮದಲ್ಲಿ ಪೋಲಿಸರು ಜಪ್ತಿ ಮಾಡಿರುತ್ತಾರೆ ಮತ್ತು ತದನಂತರ ಪಂಚನಾಮೆಯನ್ನು ತಯಾರಿಸಿ ಸದರಿಯವರ ಸಹಿಯನ್ನು ಪಡೆದಿರುತ್ತಾರೆ ಎಂದು ಸೂಚಿಸುವುದು ಸರಿಯಲ್ಲ ಎಂದು ಹೇಳಿದ್ದಾರೆ. ಸದರಿ ಸಾಕ್ಷ್ಯಾಧಾರವನ್ನು ಪ್ರತಿಕೂಲ ಸಾಕ್ಷಿ ಎಂದು ಪರಿಗಣಿಸಲಾಯಿತು.

ನಂತರ ಕಲ್ಲಪ್ಪ ಚನ್ನಪ್ಪ ಹಂಚಿನಮನಿ, ಹಿರೇಬಾಗೇವಾಡಿ ಪಂಚರು ಇವರ ಹೇಳಿಕೆಯನ್ನು ಪ್ರಾ.ಸಾ-3 ಆಗಿ ಪಡೆಯಲಾಯಿತು. ಸದರಿಯವರು ಈ ಪ್ರಾಧಿಕಾರದ ಮುಂದೆ ದಿನಾಂಕ: 24.07.2003 ರಂದು ಹಾಜರಾಗಿ ತಮ್ಮ ಹೇಳಿಕೆಯನ್ನು ನೀಡುತ್ತ, ದಿನಾಂಕ: 3.11.2001 ರಂದು ತಾರಿಹಾಳ ಕ್ರಾಸ್ ಹತ್ತಿರ ಸದರಿಯವರ ಸಮಕ್ಷಮದಲ್ಲಿ ಒಂದು ಮಾರುತಿ ವ್ಯಾನ್ ನಿಲ್ಲಿಸಿರುವುದಿಲ್ಲ ಮತ್ತು ಅದನ್ನು ತಪಾಸಣೆ ಮಾಡಿರುವುದಿಲ್ಲ ಹಾಗೂ ಅದರಲ್ಲಿ ಅನಧಿಕೃತ ಫೆನ್ನಿಯನ್ನು ಜಪ್ತಿ ಮಾಡಿರುವುದಿಲ್ಲ ಹಾಗೂ ಅವರ ಸಮಕ್ಷಮದಲ್ಲಿ ಪಂಚನಾಮೆಯನ್ನು ಬರೆದಿರುವುದಿಲ್ಲವೆಂದು ಹೇಳಿದ್ದಾರೆ. ಸದರಿಯವರು ಆರಕ್ಷಕ ಠಾಣೆಯಲ್ಲಿ ನಿಪಿ-1 ರ ಮೇಲೆ ಸಹಿ ಮಾಡಿದ್ದಾಗಿಯೂ ಹಾಗೂ ಈ ಪ್ರಕರಣದ ಕುರಿತು ಯಾವುದೇ ಮಾಹಿತಿ ಇರುವುದಿಲ್ಲವೆಂದು ಹೇಳಿದ್ದಾರೆ.

ನಂತರ ಸದರಿಯವರು ಸಹಾಯಕ ಅಭಿಯೋಗ ನಿರ್ದೇಶಕರ ಪಾಟೀ ಸವಾಲಿಗೆ ಉತ್ತರಿಸುತ್ತ ಸದರಿಯವರು ದಿನಾಂಕ: 3.11.2001 ರಂದು ಹಲಗಾ ಗ್ರಾಮದ ಹದ್ದಿನಲ್ಲಿ ತಾರಿಹಾಳ ಕ್ರಾಸ್ ಹತ್ತಿರ ಪೋಲಿಸರು ಸದರಿಯವರ ಸಮಕ್ಷಮದಲ್ಲಿ ಒಂದು ಮಾರುತಿ

ವ್ಯಾನ್ ಹಾಗೂ ಅದರಲ್ಲಿರುವ ಫೆನ್ನಿಯನ್ನು ಪೋಲಿಸರು ಜಪ್ತಿ ಮಾಡಿರುತ್ತಾರೆ ಮತ್ತು ತದನಂತರ ಪಂಚನಾಮೆಯನ್ನು ತಯಾರಿಸಿ ಸದರಿಯವರ ಸಹಿ ಪಡೆದಿರುತ್ತಾರೆ ಎನ್ನುವುದು ಸರಿಯಲ್ಲ ಎಂದು ತಿಳಿಸಿದ್ದಾರೆ.

ನಂತರ ಈ ಪ್ರಕರಣದ ತನಿಖಾಧಿಕಾರಿಗಳಾದ ಶ್ರೀ ವ್ಹಿಆರ್. ಮಾಯನ್ನವರ, ಅಬಕಾರಿ ಸಬ್ ಇನ್ಸ್‌ಪೆಕ್ಟರ್, ದಕ್ಷಿಣ ಉಪ ವಲಯ ನಂ.1, ಬೆಳಗಾಂವ ಇವರ ಹೇಳಿಕೆಯನ್ನು ಪ್ರಾ.ಸಾ-4 ಆಗಿ ಪಡೆಯಲಾಯಿತು. ಸದರಿಯವರು ಈ ಪ್ರಾಧಿಕಾರದ ಮುಂದೆ ದಿನಾಂಕ: 6.11.2003 ರಂದು ಹಾಜರಾಗಿ ತಮ್ಮ ಹೇಳಿಕೆಯನ್ನು ನೀಡುತ್ತ ಸದರಿಯವರು ದಿನಾಂಕ: 22.3.2001 ರಿಂದ ಅಬಕಾರಿ ಸಬ್ ಇನ್‌ಸ್ಪೆಕ್ಟರ್ ಎಂದು ದಕ್ಷಿಣ ಉಪ ವಲಯ ನಂ-1 ರಲ್ಲಿ ಕಾರ್ಯನಿರ್ವಹಿಸುತ್ತಿರುವುದಾಗಿಯೂ ತಿಳಿಸಿ ದಿನಾಂಕ: 8.11.2001 ರಂದು ಈ ಪ್ರಕರಣದ ಮುಂದಿನ ತನಿಖೆಯನ್ನು ವಹಿಸಿಕೊಂಡಿದ್ದಾಗಿ ತಿಳಿಸಿದ್ದಾರೆ. ಹಾಗೂ ಸದರಿ ಪ್ರಕರಣಕ್ಕೆ ಸಂಬಂಧಿಸಿದ ಕಾಗದ ಪತ್ರಗಳನ್ನು ಮುದ್ದೆಮಾಲು, ವಾಹನ ನಂ. ಕೆಎ-23-ಎಂ-305 ಹಾಗೂ ಸ್ಯಾಂಪಲ್ ಬಾಟಲುಗಳನ್ನು ತಮ್ಮ ತಾಬಾಕ್ಕೆ ತೆಗೆದುಕೊಂಡಿದ್ದಾಗಿ ತಿಳಿಸಿದ್ದಾರೆ. ಜಪ್ತಾದ ವಾಹನವನ್ನು ಈಗಾಗಲೇ ಮುದ್ದೆಮಾಲು-1 ಎಂದು ಗುರುತಿಸಲಾಗಿದೆ. ದಿನಾಂಕ: 29.11.2001 ರಂದು ಸ್ಯಾಂಪಲ್ ಬಾಟಲುಗಳನ್ನು ರಸಾಯನಿಕ ಪರೀಕ್ಷೆಗಾಗಿ ಅಬಕಾರಿ ರಕ್ಷಕರಾದ ಶ್ರೀ ಎಂ.ಎಂ. ಚಿಕ್ಕೋಡಿಕರ ಇವರೊಂದಿಗೆ ಬೆಂಗಳೂರಿಗೆ ಕಳುಹಿಸಿ ರಸಾಯನಿಕ ಪರೀಕ್ಷೆಯ ಪ್ರಮಾಣ ಪತ್ರವನ್ನು ಪಡೆದುಕೊಂಡಿದ್ದಾಗಿ ತಿಳಿಸಿದ್ದಾರೆ. ಸದರಿ ಪ್ರಮಾಣ ಪತ್ರದ ದೃಢೀಕೃತ ಪ್ರತಿಯನ್ನು ನಿಪಿ-6 ಎಂತಲೂ ಹಾಗೂ ಅದರ ಮೇಲಿನ ಅವರ ಸಹಿಯನ್ನು ನಿಪಿ-6(ಎ) ಎಂತಲೂ ಗುರುತಿಸಲಾಗಿದೆ. ಮಾದರಿ ಹೊರತುಪಡಿಸಿ ಜಪ್ತಾದ ಫೆನ್ನಿಯನ್ನು ಸರಕಾರಕ್ಕೆ ಮುಟ್ಟುಗೋಲು ಹಾಕಿಕೊಂಡು ವಿಲೇ ಮಾಡಲು ಆದೇಶ ಮಾಡುವಂತೆ ದಿನಾಂಕ: 20.12.2001 ರಂದು ಮಾನ್ಯ ಅಧಿಕೃತ ಅಧಿಕಾರಿಯವರಿಗೆ ವಿನಂತಿಸಿದ್ದಾಗಿ ತಿಳಿಸಿದ್ದಾರೆ. ಸದರಿ ಪತ್ರವನ್ನು ನಿಪಿ-7 ಎಂತಲೂ ಹಾಗೂ ಅದರ ಮೇಲಿನ ಸದರಿಯವರ ಸಹಿಯನ್ನು ನಿಪಿ-7(ಎ) ಎಂದು ಗುರುತಿಸಲಾಗಿದೆ. ಅಧಿಕೃತ ಅಧಿಕಾರಿಯವರ ಆದೇಶ ಸಂ. ಇಎಕ್ಸ್‌ಇ:ಸಿಆರ್‌ಎಂ: ಡಿಟಿಸಿಆರ್:215:2001-02 ದಿನಾಂಕ: 28.2.2002ರ ಅನ್ವಯ ಜಪ್ತಾದ ಫೆನ್ನಿಯನ್ನು ಸರಕಾರಕ್ಕೆ ಮುಟ್ಟುಗೋಲು ಹಾಕಿಕೊಂಡು ಅದನ್ನು ವಿಲೇ ಮಾಡಲು ಆದೇಶಿಸಿರುತ್ತಾರೆ. ಸದರಿ ಆದೇಶವನ್ನು ನಿಪಿ-8 ಎಂದು ಗುರುತಿಸಲಾಗಿದೆ. ಸದರಿ ಆದೇಶದಂತೆ ಜಪ್ತಾದ ಫೆನ್ನಿಯನ್ನು ವಿಲೇ ಮಾಡಿ ಅದರಿಂದ ಬಂದ ಹಣವನ್ನು ಸರಕಾರಕ್ಕೆ ಜಮಾ ಮಾಡಿರುವುದಾಗಿ ಹೇಳಿದ್ದಾರೆ. ಜಪ್ತಾದ ವಾಹನ ಮಾಲಿಕರ ವಿವರ ತಿಳಿಸಲು ಆರ್.ಟಿ.ಓ, ಚಿಕ್ಕೋಡಿಯವರಿಗೆ ವಿನಂತಿಸಲಾಗಿ ಅವರು ಆರ್.ಟಿ.ಓ, ಬೆಳಗಾಂವಿಯವರನ್ನು ಸಂಪರ್ಕಿಸಲು ತಿಳಿಸಿದರು. ಅಷ್ಟರಲ್ಲಿ ಸದರಿ ವಾಹನದ ನೋಂದಾಯಿತ ಮಾಲಿಕರಾದ ಶ್ರೀ ಅರ್ಜುನ ಗಣಪತಸಾ ಶಿರಾಳಕರ ಇವರು ನ್ಯಾಯಾಲಯದಿಂದ ಜಾಮೀನನ್ನು ಪಡೆದುಕೊಂಡಿದ್ದು ತಿಳಿದು ಬಂದಿದ್ದಾಗಿ ತಿಳಿಸಿದ್ದಾರೆ. ಸದರಿ ಪ್ರಕರಣದಲ್ಲಿ ವಾಹನ ಮಾಲಿಕರು ತಮ್ಮ ಲಾಭಕ್ಕಾಗಿ ಅಕ್ರಮವಾಗಿ ಫೆನ್ನಿಯ ಸಾಗಾಟ ಮಾಡಿರುವುದು ಖಚಿತಪಟ್ಟಿದ್ದರಿಂದ ಅವರನ್ನೊಳಗೊಂಡು ಎಲ್ಲ ಆರೋಪಿತರ ವಿರುದ್ದ ನ್ಯಾಯಾಲಯಕ್ಕೆ ದೋಷಾರೋಪಣೆ ಪಟ್ಟಿ ಸಲ್ಲಿಸಿದ್ದಾಗಿ ತಿಳಿಸಿದ್ದಾರೆ. ಅದರ ಸಿಸಿ ನಂ. 365:2002 ಇದ್ದು ಅದು ಚಾಲ್ತಿಯಲ್ಲಿದೆ ಎಂದು ತಿಳಿಸಿದ್ದಾರೆ. ಆದ್ದರಿಂದ ಪ್ರಕರಣದಲ್ಲಿ ಜಪ್ತಾದ ವಾಹನವನ್ನು ಸರಕಾರಕ್ಕೆ ಮುಟ್ಟುಗೋಲು ಹಾಕಿಕೊಳ್ಳಲು ವಿನಂತಿಸಿದ್ದಾರೆ. ಮಾದರಿ ಬಾಟಲುಗಳನ್ನು ಹಾಜರುಪಡಿಸಿದ್ದು ಅವುಗಳನ್ನು ಮುದ್ದೆಮಾಲು-2 ಎಂದು ಗುರುತಿಸಲಾಗಿದೆ.

ನಂತರ ಸದರಿಯವರು ವಾಹನ ಮಾಲಿಕರ ಪರ ವಕೀಲರಾದ ಶ್ರೀ ಬಿ. ಆರ್. ಕಾದ್ರೊಳ್ಳಿ ಇವರ ಪಾಟೀ ಸವಾಲಿಗೆ ಉತ್ತರಿಸುತ್ತ ಸದರಿಯವರು ಗುನ್ಹೆ ನಡೆದ ಸ್ಥಳಕ್ಕೆ ಭೇಟಿ ನೀಡಿಲ್ಲವೆಂತಲೂ ಹಾಗೂ ಸಾಕ್ಷಿದಾರರ ಹೇಳಿಕೆಯನ್ನು ಪಡೆದುಕೊಂಡಿರುವುದಿಲ್ಲವೆಂದು ತಿಳಿಸಿರುತ್ತಾರೆ. ಅದರಂತೆಯೇ ಅಬಕಾರಿ ರಕ್ಷಕನ ಹೇಳಿಕೆ ಪಡೆದಿರುವುದಿಲ್ಲವೆಂದು ತಿಳಿಸಿದ್ದಾರೆ. ಸದರಿಯವರು ತಾನು ವಾಹನ ಮಾಲಿಕರ ವಿರುದ್ಧ ಸುಳ್ಳು ಕೇಸು ಹಾಕಿದ್ದೇನೆ ಅಥವಾ ವಾಹನದಲ್ಲಿ ಯಾವುದೇ ಫೆನ್ನಿಯ ಅಕ್ರಮ ಸಾಗಾಟವಾಗಿರುವುದಿಲ್ಲ ಅಥವಾ ಫಿರ್ಯಾದಿಯವರ ಮಾತು ಕೇಳಿ ಸುಳ್ಳು ಹೇಳುತ್ತಿದ್ದೇನೆ ಎಂದರೆ ಸರಿಯಲ್ಲ ಎಂದು ಹೇಳಿದ್ದಾರೆ.

ಈ ಪ್ರಕರಣದ ಕುರಿತು ತಮ್ಮ ಹೇಳಿಕೆಯನ್ನು ನೀಡಲು ವಾಹನ ಮಾಲಿಕರಿಗೆ ಈ ಪ್ರಾಧಿಕಾರದಿಂದ ಮೂರು ಬಾರಿ ನೋಟೀಸುಗಳನ್ನು ನೀಡಿದ್ದರೂ ಸದರಿಯವರು ಈ ಪ್ರಾಧಿಕಾರದ ಮುಂದೆ ಹಾಜರಾಗಿರುವುದಿಲ್ಲ ಹಾಗೂ ತಮ್ಮ ಹೇಳಿಕೆಯನ್ನು ನೀಡಿರುವುದಿಲ್ಲ.

ಈ ಪ್ರಕರಣದಲ್ಲಿ ಪಂಚ ಸಾಕ್ಷಿದಾರರಾದ ಪ್ರಾ.ಸಾ-2 ಹಾಗೂ ಪ್ರಾ.ಸಾ-3 ಪ್ರತಿಕೂಲ ಸಾಕ್ಷ್ಯ ನೀಡಿದ್ದರೂ ಸಹ ತನಿಖಾಧಿಕಾರಿ ತೃಪ್ತಿಕರ ಸಾಕ್ಷ್ಯ ನೀಡಿದರೆ ಅವರ ಸಾಕ್ಷ್ಯವನ್ನು ನಂಬಬಹುದಾಗಿದೆ. ಈ ಪ್ರಕರಣದಲ್ಲಿ ಪ್ರಾಧಿಕಾರಕ್ಕೆ ಅಬಕಾರಿ ಅಪರಾಧದಲ್ಲಿ ವಾಹನವನ್ನು ಜಪ್ತಿ ಮಾಡಿಕೊಳ್ಳಲಾಗಿದೆಯೆಂದು ತೃಪ್ತಿಕರವಾಗಿ ಮನವರಿಕೆಯಾದರೆ ಕಾನೂನು ಪ್ರಕಾರ ಸಾಕಾಗಬಹುದೇ ಹೊರತು ಸಂಗತಿಯನ್ನು ಸಂಶಯಾತೀತವಾಗಿ ರುಜುವಾತು ಪಡಿಸುವ ಅಗತ್ಯ ಇರುವುದಿಲ್ಲ. ಅಲ್ಲದೇ ಐ.ಎಲ್.ಆರ್. 1978 ಸುಪ್ರೀಮ್ ಕೋರ್ಟ್ ಪುಟ ಸಂ. 151 ರಲ್ಲಿ ನಮೂದಿಸಿದಂತೆ

"If the evidence of the investigating officer who recovered the materials object is concerning the evidence as to recovery need not be rejected on the ground that the seizure witness do not support the prosecution version"

ಆದ್ದರಿಂದ ಪ್ರಾ.ಸಾ-1 ಹಾಗೂ ಪ್ರಾ.ಸಾ-4 ಇವರ ಹೇಳಿಕೆಯ ಮೇಲೆ ದಿನಾಂಕ: 3.11.2001 ರಂದು ವಾಹನ ಮಾರುತಿ ವ್ಯಾನ್ ಸಂ.ಕೆಎ-23-ಎಂ-305 ರಲ್ಲಿ ಫೆನ್ನಿಯ ಅಕ್ರಮ ಸಾಗಾಣಿಕೆಯಾಗಿರುವುದು ನಿಜವೆಂದು ಕಂಡು ಬರುತ್ತದೆ. ಆದ್ದರಿಂದ ಒಂದನೆಯ ಅಂಶವನ್ನು ಗುಣಾತ್ಮಕವಾಗಿ ಪರಿಗಣಿಸಲಾಗಿದೆ.

ವಾಹನ ಮಾಲಿಕರು ತಮ್ಮ ಹೇಳಿಕೆಯನ್ನು ನೀಡಲು ಈ ಪ್ರಾಧಿಕಾರದ ಮುಂದೆ ಹಾಜರಾಗಿರುವುದಿಲ್ಲ ಮತ್ತು ಸದರಿ ಅಪರಾಧವು ಸದರಿಯವರಿಂದ ಜರುಗಿರುವುದಿಲ್ಲ ಎಂದು ಸಿದ್ಧಪಡಿಸುವಲ್ಲಿ ವಿಫಲರಾಗಿದ್ದಾರೆ. ಆದ್ದರಿಂದ ಸದರಿ ಫೆನ್ನಿಯ ಅಕ್ರಮ ಸಾಗಾಟವು ಅವರಿಂದಲೇ ನಡೆದಿದೆ ಎಂದು ಪ್ರಾಧಿಕಾರಕ್ಕೆ ಮನವರಿಕೆಯಾಗುತ್ತದೆ. ಆದ್ದರಿಂದ ಎರಡನೇ ಪ್ರಶ್ನೆಗೆ ಉತ್ತರ ಇಲ್ಲ ಎಂದು

ಪರಿಗಣಿಸಲಾಗಿದೆ. ಈ ಮೇಲೆ ನಮೂದಿಸಿದಂತೆ ಸದರಿ ವಾಹನದಲ್ಲಿ ಫೆನ್ನಿಯ ಅಕ್ರಮ ಸಾಗಾಟ ನಡೆದಿರುವುದು ಪ್ರಾಧಿಕಾರಕ್ಕೆ ಮನವರಿಕೆಯಾಗಿರುವುದರಿಂದ ಈ ಪ್ರಕರಣದಲ್ಲಿ ಜಪ್ತಾದ ವಾಹನ ಮಾರುತಿ ವ್ಯಾನ್ ನಂ. ಕೆಎ-23-ಎಂ-305ನ್ನು ಸರಕಾರಕ್ಕೆ ಮುಟ್ಟುಗೋಲು ಹಾಕಿಕೊಳ್ಳುವುದು ಉಚಿತವೆಂದು ಪ್ರಾಧಿಕಾರಕ್ಕೆ ಮನವರಿಕೆಯಾಗಿದ್ದರಿಂದ ಈ ಕೆಳಗಿನಂತೆ ಆದೇಶ ಹೊರಡಿಸಲಾಗಿದೆ.

**ಆದೇಶ**

ಶ್ರೀ ಪಿ. ಎನ್. ಮುರಗೋಡ, ಅಧಿಕೃತ ಅಧಿಕಾರಿಗಳು ಹಾಗೂ ಡೆಪ್ಯೂಟಿ ಕಮೀಷನರ್ ಆಫ್ ಎಕ್ಸೈಜ್, ಬೆಳಗಾಂವ ಜಿಲ್ಲೆ, ಬೆಳಗಾಂವ ಆದ ನಾನು ಕರ್ನಾಟಕ ಅಬಕಾರಿ ಕಾಯ್ದೆ 1965ರ ಕಲಂ 43(ಎ) ರ ಅಡಿಯಲ್ಲಿ ದತ್ತವಾದ ಅಧಿಕಾರವನ್ನು ಚಲಾಯಿಸಿ ಪಿ.ಎಸ್.ಐ., ಹಿರೇಬಾಗೇವಾಡಿ ಪಿ.ಎಸ್ ಇವರು ದಾಖಲು ಮಾಡಿದ ಗುನ್ಹೆ ನಂ. 225/2001 ದಿನಾಂಕ: 03.11.2001 ನೇದ್ದರಲ್ಲಿ ಜಪ್ತಾದ ವಾಹನ ಮಾರುತಿ ವ್ಯಾನ್ ಸಂ.ಕೆಎ-23-ಎಂ-305ನ್ನು ಕರ್ನಾಟಕ ಸರ್ಕಾರಕ್ಕೆ ಮುಟ್ಟುಗೋಲು ಹಾಕಿಕೊಂಡಿರುತ್ತೇನೆ.

ಈ ಪ್ರಕರಣದಲ್ಲಿ ಜಪ್ತಾದ ಒಟ್ಟು 120.960 ಲೀಟರ್ ಫೆನ್ನಿಯಲ್ಲಿ 5.040 ಲೀಟರ್ ಫೆನ್ನಿ ಸ್ಯಾಂಪಲ್ ಬಾಟಲು ಹೊರತುಪಡಿಸಿ ಉಳಿದ 115.920 ಲೀಟರ್ ಫೆನ್ನಿಯನ್ನು ಈಗಾಗಲೇ ಈ ಪ್ರಾಧಿಕಾರದ ಆದೇಶ ಸಂ. ಇಎಕ್ಸ್‌ಇ:ಸಿಆರ್‌ಎಂ: ಡಿಟಿಸಿಆರ್:215:2001-02 ದಿನಾಂಕ: 28.02.2002 ರಲ್ಲಿ ಸರ್ಕಾರಕ್ಕೆ ಮುಟ್ಟುಗೋಲು ಹಾಕಿಕೊಂಡು ವಿಲೇವಾರಿ ಮಾಡಲಾಗಿದೆ.

ಈ ಆದೇಶವನ್ನು ಇಂದು ದಿನಾಂಕ: 26.2.2004 ರಂದು ಉಕ್ತಲೇಖನ ಕೊಟ್ಟು ಗಣಕಯಂತ್ರದಲ್ಲಿ ಮುದ್ರಣ ಮಾಡಿಸಿ ಪ್ರತಿಯನ್ನು ತಿದ್ದಿ ತೆರೆದ ನ್ಯಾಯಾಲಯದಲ್ಲಿ ಘೋಷಿಸಲಾಗಿದೆ.

**ಪಿ. ಎನ್. ಮುರಗೋಡ**

ಅಧಿಕೃತ ಅಧಿಕಾರಿಗಳು ಹಾಗೂ ಡೆಪ್ಯೂಟಿ ಕಮೀಷನರ್ ಆಫ್ ಎಕ್ಸೈಜ್, ಬೆಳಗಾಂವ ಜಿಲ್ಲೆ, ಬೆಳಗಾಂವ.

**ಅನುಬಂಧ-1**

**ಫಿರ್ಯಾದುದಾರರ ಪರ ಮಂಡಿಸಲಾದ ಸಾಕ್ಷಿಗಳ ವಿವರ:**

| | | | |
|---|---|---|---|
| ಪ್ರಾ.ಸಾ. 1 | - | ಶ್ರೀ ಬಿ. ಎ. ಮಠದ, ಪಿ.ಎಸ್.ಐ, ಹಿರೇಬಾಗೇವಾಡಿ ಪಿ.ಎಸ್. | - ಫಿರ್ಯಾದುದಾರರು |
| ಪ್ರಾ.ಸಾ. 2 | - | ಶ್ರೀ ಕಲ್ಲಪ್ಪ ಯಲ್ಲಪ್ಪ ನಾವಲಗಟ್ಟಿ, ಹಿರೇಬಾಗೇವಾಡಿ | - ಪಂಚ |
| ಪ್ರಾ.ಸಾ. 3 | - | ಶ್ರೀ ಕಲ್ಲಪ್ಪ ಚನ್ನಪ್ಪ ಹಂಚಿನಮನಿ, ಹಿರೇಬಾಗೇವಾಡಿ | - ಪಂಚ |
| ಪ್ರಾ.ಸಾ. 4 | - | ಶ್ರೀ ವ್ಹಿ.ಆರ್. ಮಾಯನ್ನವರ, ಅಬಕಾರಿ ಸಬ್ ಇನ್ಸ್‌ಸ್ಪೆಕ್ಟರ್, ದಕ್ಷಿಣ ಉಪವಲಯ ನಂ-1, ಬೆಂಳಗಾಂವ | -ತನಿಖಾಧಿಕಾರಿ |

**ಅನುಬಂಧ-2**

**ಫಿರ್ಯಾದುದಾರರ ಪರ ಮಂಡಿಸಲಾದ ದಾಖಲೆಗಳು:**

| | | |
|---|---|---|
| ನಿಶಾನೆ ಪಿ-1 | - | ಪಂಚನಾಮೆಯ ಕಾರ್ಬನ್ ಪ್ರತಿ. |
| ನಿಶಾನೆ ಪಿ-1(ಎ) | - | ಅದರ ಮೇಲಿನ ಸಹಿ. |
| ನಿಶಾನೆ ಪಿ-2 | - | ಫಿರ್ಯಾದಿನ ದೃಢೀಕೃತ ಪ್ರತಿ |
| ನಿಶಾನೆ ಪಿ-2(ಎ) | - | ಅದರ ಮೇಲಿನ ಸಹಿ. |
| ನಿಶಾನೆ ಪಿ-3 | - | ಪ್ರಥಮ ಮಾಹಿತಿ ವರದಿಯ ಪ್ರತಿ. |
| ನಿಶಾನೆ ಪಿ-3(ಎ) | - | ಅದರ ಮೇಲಿನ ಸಹಿ. |
| ನಿಶಾನೆ ಪಿ-4 | - | ಜಪ್ತಾದ ಮುದ್ದೆ ಮಾಲನ್ನು ಇಟ್ಟುಕೊಳ್ಳಲು ಅನುಮತಿ ಪತ್ರ. |
| ನಿಶಾನೆ ಪಿ-4(ಎ) | - | ಅದರ ಮೇಲಿನ ಸಹಿ. |
| ನಿಶಾನೆ ಪಿ-5 | - | ಜಪ್ತಾದ ಮುದ್ದೆಮಾಲನ್ನು ಹಸ್ತಾಂತರಿಸಿದ ಪತ್ರ. |
| ನಿಶಾನೆ ಪಿ-5(ಎ) | - | ಅದರ ಮೇಲಿನ ಸಹಿ. |
| ನಿಶಾನೆ ಪಿ-6 | - | ರಾಸಾಯನಿಕ ಪರೀಕ್ಷೆ ವರದಿ. |
| ನಿಶಾನೆ ಪಿ-6(ಎ) | - | ಅದರ ಮೇಲಿನ ತನಿಖಾಧಿಕಾರಿಗಳ ಸಹಿ |
| ನಿಶಾನೆ ಪಿ-7 | - | ಜಪ್ತಾದ ಫೆನ್ನಿಯನ್ನು ಮುಟ್ಟುಗೋಲು ಹಾಕಿಕೊಳ್ಳಲು ಬರೆದ ಪತ್ರ |
| ನಿಶಾನೆ ಪಿ-7(ಎ) | - | ಅದರ ಮೇಲಿನ ಸಹಿ. |
| ನಿಶಾನೆ ಪಿ-8 | - | ಜಪ್ತಾದ ಫೆನ್ನಿಯನ್ನು ಮುಟ್ಟುಗೋಲು ಹಾಕಿಕೊಂಡ ಅಧಿಕೃತ ಅಧಿಕಾರಿಗಳ ಆದೇಶ |

**ಅನುಬಂಧ-3**

**ಫಿರ್ಯಾದುದಾರ ಪರ ಗುರುತಿಸಲಾದ ವಸ್ತುಗಳು:**

1. ಮುದ್ದೆ ಮಾಲು-1 - ಜಪ್ತಾದ ವಾಹನ,
2. ಮುದ್ದೆ ಮಾಲು-2 - ಮಾದರಿ ಫೆನ್ನಿಯ ಬಾಟ್ಲಿಗಳು.

**ಅನುಬಂಧ-4**

ವಾಹನ ಮಾಲಿಕರ ಪರವಾಗಿ ವಿಚಾರಣೆ ಮಾಡಲಾದ ಸಾಕ್ಷಿದಾರರು - ಇಲ್ಲಾ

**ಅನುಬಂಧ-5**

ವಾಹನ ಮಾಲಿಕರ ಪರವಾಗಿ ಗುರುತಿಸಲಾದ ದಾಖಲೆಗಳು - ಇಲ್ಲಾ

**ಪಿ. ಎನ್. ಮುರಗೋಡ**

ಪಿ.ಆರ್.427 ಅಧಿಕೃತ ಅಧಿಕಾರಿಗಳು ಹಾಗೂ ಡೆಪ್ಯೂಟಿ ಕಮೀಷನರ್ ಆಫ್ ಎಕ್ಸೈಜ್, ಬೆಳಗಾಂವ ಜಿಲ್ಲೆ, ಬೆಳಗಾಂವ.

**ಅಧಿಕೃತ ಅಧಿಕಾರಿಗಳು ಹಾಗೂ ಡೆಪ್ಯೂಟಿ ಕಮೀಷನರ್ ಆಫ್ ಎಕ್ಸೈಜ್, ಬೆಳಗಾಂವ ಜಿಲ್ಲೆ ಇವರ ನ್ಯಾಯಾಲಯದಲ್ಲಿ**

**ಪ್ರಕರಣ ಸಂಖ್ಯೆ :** ಅಬಕಾರಿ ಇನ್‌ಸ್ಪೆಕ್ಟರ, ಇ.ಐ.ಬಿ, ಬೆಳಗಾಂವ ಇವರ ಗುನ್ನೆ ಸಂ. 4/2002-03 ದಿನಾಂಕ: 08.10.2002.

**ಆದೇಶ ಸಂಖ್ಯೆ :** ಇಎಕ್ಸ್‌ಇ:ಡಿಟಿಸಿಆರ್:575:2002-03 ದಿನಾಂಕ: 12.2.2004

**ಉಪಸ್ಥಿತರು :** ಶ್ರೀ ಪಿ. ಎನ್. ಮುರಗೋಡ ಅಧಿಕೃತ ಅಧಿಕಾರಿಗಳು ಹಾಗೂ ಡೆಪ್ಯೂಟಿ ಕಮೀಷನರ್ ಆಫ್ ಎಕ್ಸೈಜ್ ಬೆಳಗಾಂವ ಜಿಲ್ಲೆ, ಬೆಳಗಾಂವ

**ಫಿರ್ಯಾದಿ :** ಶ್ರೀ ಬಿ. ಎ. ಹಡಲಗೆ ಅಬಕಾರಿ ಇನ್ಸ್‌ಸೆಕ್ಟರ್ ಇ.ಐ.ಬಿ., ಬೆಳಗಾಂವ.

**ವಿರುದ್ಧ**

**ಆರೋಪಿತರು :** 1. ಶ್ರೀ ಎಂ. ಸದಾಶಿವ ತಂದೆ ಮುನಿಬೆಟ್ಟಪ್ಪ ನಂ. 6/22, 4ನೇ ಅಡ್ಡ ರಸ್ತೆ, ಆಝಾದನಗರ ಚಾಮರಾಜಪೇಟೆ, ಬೆಂಗಳೂರು-18. ವಾಹನ ಮಾಲಿಕರು.

2. ಶ್ರೀ ಮೋಹನ ತಂದೆ ಕೆಂಪೇಗೌಡ ದೊಡ್ಡ ಹಾಲಹಳ್ಳಿ, ತಾ: ಕನಕಪುರ ಜಿಲ್ಲೆ, ಬೆಂಗಳೂರು.

**ಪ್ರಸ್ತಾವನೆ:**

ದಿನಾಂಕ: 08.10.2002 ರಂದು ಈ ಪ್ರಕರಣದ ಫಿರ್ಯಾದಿಯಾದ ಶ್ರೀ ಬಿ.ಎ. ಹಡಲಗೆ, ಅಬಕಾರಿ ಇನ್‌ಸ್ಪೆಕ್ಟರ್, ಇ.ಐ.ಬಿ. ಬೆಳಗಾಂವ ಇವರಿಗೆ ಬೆಂಗಳೂರಿನಿಂದ ಬೆಳಗಾಂವಿಗೆ ಮದ್ಯದ ಅಕ್ರಮ ಸಾಗಾಟ ಆಗುವ ಕುರಿತು ಖಾತ್ರಿದಾಯಕ ಬಾತ್ಮಿ ಬಂದ ಮೇರೆಗೆ ಮಧ್ಯಾಹ್ನ ಸುಮಾರು 3.30 ಗಂಟೆಗೆ ತಮ್ಮ ಸಿಬ್ಬಂದಿ ಹಾಗೂ ಪಂಚರೊಂದಿಗೆ ಅಬಕಾರಿ ಅಧೀಕ್ಷಕರು, ಬೆಳಗಾಂವ ಜಿಲ್ಲೆ ಇವರ ನೇತೃತ್ವದಲ್ಲಿ ಬೆಳಗಾಂವಿಯ ಹೊಸ ಗಾಂಧಿನಗರ ರಾಷ್ಟ್ರೀಯ ಹೆದ್ದಾರಿ ನಂ. 4ರ ಮೇಲೆ ಸಾಗರ ಹೋಟೆಲ್ ಹತ್ತಿರ ರಸ್ತೆಕಾವಲು ಮಾಡುತ್ತಿದ್ದಾಗ ಮಧ್ಯಾಹ್ನ 4.00 ಗಂಟೆಗೆ ಬೆಂಗಳೂರು ಕಡೆಯಿಂದ ಬೆಳಗಾಂವ ಕಡೆಗೆ ಒಂದು ಲಾರಿ ಅಶೋಕ ಲೈಲ್ಯಾಂಡ್ ಬರುವುದನ್ನು ನೋಡಿ ಅದನ್ನು ನಿಲ್ಲಿಸಿ ತಪಾಸಿಸಲಾಗಿ ಅದರ ಸಂ. ಕೆಎ-16-554 ಇತ್ತು ವಾಹನವನ್ನು ತಪಾಸಿಸಲಾಗಿ ಅದರ ಒಳಗೆ ಮದ್ಯದ ಬಾಟಲಿಗಳನ್ನು ತುಂಬಿದ ರಟ್ಟಿನ ಪೆಟ್ಟಿಗೆಗಳು ಇದ್ದವು ವಾಹನದಲ್ಲಿ ಒಬ್ಬನೇ ವ್ಯಕ್ತಿ (ಡ್ರೈವರ್) ಇದ್ದು ಅವನ ಹೆಸರು ಕೇಳಲಾಗಿ ಅವನು ತನ್ನ ಹೆಸರನ್ನು ಮೋಹನ ತಂದೆ ಕೆಂಪೇಗೌಡ, ಸಾ: ದೊಡ್ಡಹಾಲಹಳ್ಳಿ, ತಾ: ಕನಕಪುರ, ಜಿಲ್ಲೆ: ಬೆಂಗಳೂರು ಎಂದು ಹೇಳಿದನು. ಸದರಿ ಮದ್ಯದ ಬಾಟಲಿಗಳನ್ನು ಸಾಗಾಟ ಮಾಡಲು ಪರ್ಮಿಟ್ ಅಥವಾ ಲೈಸೆನ್ಸ್ ವಗೈರೆ ಇದೆಯೇ ಎಂದು ಕೇಳಲಾಗಿ ಅವನು ಇಲ್ಲ ಎಂದು ಹೇಳಿದನು. ಮದ್ಯದ ಪೆಟ್ಟಿಗೆಗಳನ್ನು ಎಣಿಕೆ ಮಾಡಲಾಗಿ ಒಟ್ಟು 620 ಪೆಟ್ಟಿಗೆಗಳು ಇದ್ದದ್ದು ಕಂಡು ಬಂದಿತು. ಮದ್ಯದ ಬಾಟಲಿಗಳ ವಿವರ ಈ ಕೆಳಗಿನಂತೆ ಇತ್ತು.

| | | | |
|---|---|---|---|
| 1. | 20 ಪೆಟ್ಟಿಗೆ x 12 x 750 ಎಂ.ಎಲ್ | - | 8 ಪಿ.ಎಂ. ವ್ಹಿಸ್ಕಿ |
| 2. | 07 ಪೆಟ್ಟಿಗೆ x 24 x 375 ಎಂ.ಎಲ್ | - | 8 ಪಿ. ಎಂ. ವ್ಹಿಸ್ಕಿ |
| 3. | 37 ಪೆಟ್ಟಿಗೆ x 48 x 180 ಎಂ.ಎಲ್ | - | 8 ಪಿ. ಎಂ. ವ್ಹಿಸ್ಕಿ |
| 4. | 100 ಪೆಟ್ಟಿಗೆ x 48 x 180 ಎಂ.ಎಲ್ | - | ಆಫೀಸರ್ ಚಾಯ್ಸ್ xxx ರಮ್ |
| 5. | 56 ಪೆಟ್ಟಿಗೆ x 48 x 180 ಎಂ.ಎಲ್ | - | ರಾಜಾ ವ್ಹಿಸ್ಕಿ |
| 6. | 25 ಪೆಟ್ಟಿಗೆ x 48 x 180 ಎಂ.ಎಲ್ | - | ರಾಜಾ ಜಿನ್ |
| 7. | 375 ಪೆಟ್ಟಿಗೆ x 48 x 180 ಎಂ.ಎಲ್ | - | ರಾಜಾ xxx ರಮ್ |
| | 620 ಪೆಟ್ಟಿಗೆ 5366.520 ಲೀ ಮದ್ಯ | | |

ಸದರಿ ಮದ್ಯವು ಅಕ್ರಮವಾಗಿ ಸರಕಾರಕ್ಕೆ ಕರಕೊಡದೇ ಸಾಗಾಟ ಆಗುತ್ತಿರುವುದು ಖಚಿತಪಟ್ಟಿದ್ದರಿಂದ ಸದರಿ ಮದ್ಯ ಹಾಗೂ ವಾಹನಗಳನ್ನು ಜಪ್ತಿ ಮಾಡಿಕೊಳ್ಳಲಾಯಿತು ಹಾಗೂ ಆರೋಪಿಯನ್ನು ವಶಕ್ಕೆ ತೆಗೆದುಕೊಳ್ಳಲಾಯಿತು. ನಂತರ ಅ.ನಂ. 1 ಮತ್ತು 2 ಪೆಟ್ಟಿಗೆಗಳಿಂದ ತಲಾ 2 ಬಾಟಲಿ ಹಾಗೂ ಅ.ನಂ. 3 ರಿಂದ 7 ರ ವರೆಗಿನ ಪೆಟ್ಟಿಗೆಗಳಿಂದ ತಲಾ 3 ಬಾಟಲಿಗಳಂತೆ ಒಟ್ಟು 19 ಬಾಟಲಿಗಳನ್ನು ಸ್ಯಾಂಪಲ್ ತೆಗೆದು ಅವುಗಳನ್ನು ಬಿಳಿ ಅರಿವೆಯಿಂದ ಸೀಲ್ ಮಾಡಿ ಸದರಿಯವರ ಹಾಗೂ ಪಂಚರ ಸಹಿ ಇರುವ ಚೀಟಿಗಳನ್ನು ಅಂಟಿಸಲಾಯಿತು. ನಂತರ ಈ ಕುರಿತು ಸ್ಥಳದಲ್ಲಿಯೇ ಸಾಯಂಕಾಲ 4 ಗಂಟೆಯಿಂದ 6 ಗಂಟೆಯವರೆಗೆ ಪಂಚನಾಮೆಯನ್ನು ಬರೆಯಲಾಯಿತು. ನಂತರ ಸದರಿಯವರು ಕಛೇರಿಗೆ ಬಂದು ಅವರೇ ಫಿರ್ಯಾದಿಯಾಗಿ ಆರೋಪಿತರ ವಿರುದ್ಧ ಕರ್ನಾಟಕ ಅಬಕಾರಿ ಕಾಯ್ದೆ 1965 ರ ಕಲಂ 11, 12, 14(2), 32, 34 ಹಾಗೂ 38(ಎ) ರ ಪ್ರಕಾರ ಗುನ್ನೆ ನಂ. 4/2002-03 ದಿನಾಂಕ: 08.10.2002ನ್ನು ದಾಖಲಿಸಿರುತ್ತಾರೆ ಹಾಗೂ ಮುದ್ದೆಮಾಲುಗಳ ಬಗ್ಗೆ ಮುಂದಿನ ಕ್ರಮಕ್ಕಾಗಿ ಅಧಿಕೃತ ಅಧಿಕಾರಿಯವರಿಗೆ ವರದಿ ಸಲ್ಲಿಸಿರುತ್ತಾರೆ.

ನಂತರ ವಾಹನ ಮಾಲಿಕರಾದ ಶ್ರೀ ಎಂ. ಸದಾಶಿವ ಇವರು ತಮ್ಮ ವಕೀಲರಾದ ಶ್ರೀ ಬಿ. ಆರ್. ಕಾದ್ರೊಳ್ಳಿ ಇವರ ಮುಖಾಂತರ ದಿನಾಂಕ: 31.10.2002 ರಂದು ವಕಾಲತನಾಮಾ ನೀಡಿರುತ್ತಾರೆ ಹಾಗೂ ತಮ್ಮ ವಕೀಲರ ಮುಖಾಂತರ ಅರ್ಜಿಯನ್ನು ಸಲ್ಲಿಸಿ ತಮ್ಮ

ವಾಹನವು ಯಾವುದೇ ಮದ್ಯದ ಅಕ್ರಮ ಸಾಗಾಟದಲ್ಲಿ ಭಾಗಿಯಾಗಿಲ್ಲವೆಂತಲೂ ತಾವು ಈ ಪ್ರಾಧಿಕಾರಕ್ಕೆ ಬ್ಯಾಂಕ್ ಗ್ಯಾರಂಟಿಯನ್ನು ಸಲ್ಲಿಸಲು ಸಿದ್ಧರಿರುವುದಾಗಿ ತಿಳಿಸಿ ಸದರಿ ವಾಹನವನ್ನು ತಮ್ಮ ಮಧ್ಯಂತರ ವಶಕ್ಕೆ ಬಿಡುಗಡೆ ಮಾಡಲು ವಿನಂತಿಸಿಕೊಂಡಿದ್ದಾರೆ. ಸದರಿ ಅರ್ಜಿಯ ಕುರಿತು ಎ.ಡಿ.ಪಿ. ಯವರು ದಿನಾಂಕ: 7.11.2002 ರಂದು ತಮ್ಮ ತಕರಾರನ್ನು ಸಲ್ಲಿಸಿ ಜಪ್ತಾದ ವಾಹನವನ್ನು ವಾಹನ ಮಾಲಿಕರ ಮಧ್ಯಂತರ ವಶಕ್ಕೆ ಬಿಡುಗಡೆ ಮಾಡದಂತೆ ವಿನಂತಿಸಿದ್ದಾರೆ.

ರಸಾಯನ ತಜ್ಞರು, ಬೆಂಗಳೂರು ಇವರು ತಮ್ಮ ವರದಿ ನಂ. ಸಿಸಿಎಲ್-6473/2002 ದಿನಾಂಕ 22.11.2002 ರಲ್ಲಿ ಸದರಿ ಸ್ಯಾಂಪಲ್ ಬಾಟಲುಗಳಲ್ಲಿ ಮದ್ಯಸಾರದ ಅಂಶ ಇರುವುದಾಗಿಯೂ ಹಾಗೂ ಅವು ಮಾನವನ ಸೇವನೆಗೆ ಯೋಗ್ಯವಿರುವುದಾಗಿ ವರದಿಸಿದ್ದಾರೆ.

ಅಬಕಾರಿ ಉಪ ನಿರೀಕ್ಷಕರು, ಉತ್ತರ ಉಪ ವಲಯ ನಂ-1 ಇವರು ತಮ್ಮ ಪತ್ರ ದಿನಾಂಕ: 21.11.2002 ಹಾಗೂ 25.11.2002 ರಲ್ಲಿ ಈ ಪ್ರಕರಣದಲ್ಲಿ ಜಪ್ತಾದ ಮದ್ಯ ವಶಪಡಿಸಿಕೊಂಡು ಒಂದು ತಿಂಗಳ ಮೇಲಾದರೂ ಯಾರೂ ಈ ಮದ್ಯವನ್ನು ತಮ್ಮದೆಂದು ಹೇಳಿಕೊಂಡು ಬಂದಿರುವುದಿಲ್ಲವಾದ್ದರಿಂದ ಸರಕಾರದ ಆದಾಯದ ಹಿತದೃಷ್ಟಿಯಿಂದ ಸದರಿ ಮದ್ಯವನ್ನು ಸರಕಾರಕ್ಕೆ ಮುಟ್ಟುಗೋಲು ಹಾಕಿಕೊಂಡು ಬಹಿರಂಗ ಹರಾಜು ಮೂಲಕ ವಿಲೇವಾರಿ ಮಾಡಲು ವಿನಂತಿಸಿಕೊಂಡ ಪ್ರಕಾರ ಸದರಿ ಪ್ರಕರಣದಲ್ಲಿ ಜಪ್ತಾದ ಒಟ್ಟು 5366.520 ಲೀಟರ್ ಮದ್ಯವನ್ನು ಮುಟ್ಟುಗೋಲು ಹಾಕಿಕೊಳ್ಳಲಾಯಿತು ಹಾಗೂ ಸ್ಯಾಂಪಲ್ ಬಾಟಲಿಗಾಗಿ ತೆಗೆದ ಒಟ್ಟು 4.950 ಲೀಟರ್ ಮದ್ಯವನ್ನು ಹೊರತುಪಡಿಸಿ ಉಳಿದ 5361.570 ಲೀಟರ್ ಮದ್ಯವನ್ನು ಕಾನೂನು ಬದ್ಧವಾಗಿ ವಿಲೇವಾರಿ ಮಾಡಲು ಈ ಪ್ರಾಧಿಕಾರದ ಆದೇಶ ನಂ. ಇಎಕ್ಸ್‌ಇ:ಸಿಆರ್‌ಎಂ: ಡಿಟಿಸಿಆರ್:575: 2002-03 ದಿನಾಂಕ: 26.11.2002 ರಲ್ಲಿ ಅಬಕಾರಿ ಇನ್‌ಸ್ಪೆಕ್ಟರ್, ಉತ್ತರ ವಲಯ, ಬೆಳಗಾಂವ ಇವರಿಗೆ ಆದೇಶಿಸಲಾಯಿತು.

ನಂತರ ಜಪ್ತಾದ ವಾಹನವನ್ನು ಹಾಗೂ ಮದ್ಯವನ್ನು ಸರಕಾರಕ್ಕೆ ಏಕೆ ಮುಟ್ಟುಗೋಲು ಹಾಕಿಕೊಳ್ಳಬಾರದು ಎಂದು ಕಾರಣ ಕೇಳಿ ಆರೋಪಿತರಿಗೆ ದಿನಾಂಕ: 14.02.2003 ರಂದು ಈ ಪ್ರಾಧಿಕಾರದಿಂದ ಕರ್ನಾಟಕ ಅಬಕಾರಿ ಕಾಯ್ದೆ ಕಲಂ 43(ಬಿ) ರೀತ್ಯ ನೋಟೀಸನ್ನು ನೀಡಲಾಯಿತು. ಸದರಿ ನೋಟೀಸಿಗೆ ವಾಹನ ಮಾಲಿಕರು ತಮ್ಮ ವಕೀಲರ ಮುಖಾಂತರ ದಿನಾಂಕ: 6.3.2003 ರಂದು ಉತ್ತರ ಸಲ್ಲಿಸುತ್ತ, ಸದರಿ ನೋಟೀಸಿನಲ್ಲಿರುವ ಅಂಶಗಳನ್ನು ಅಲ್ಲಗಳೆದಿದ್ದಾರೆ. ಹಾಗೂ ತಮ್ಮ ಮೇಲೆ ಸುಳ್ಳು ಗುನ್ಹೆಯನ್ನು ದಾಖಲು ಮಾಡಿರುವುದಾಗಿ ತಿಳಿಸಿ, ಸದರಿ ವಾಹನವನ್ನು ತಮ್ಮ ವಶಕ್ಕೆ ಬಿಡುಗಡೆ ಮಾಡಲು ವಿನಂತಿಸಿದ್ದಾರೆ.

ಸದರಿ ಪ್ರಕರಣದಲ್ಲಿ ಜಪ್ತಾದ ಲಾರಿ ಸಂ. ಕೆಎ-16-554ರ ಮಾಲಿಕರ ಹೆಸರು ಹಾಗೂ ವಿಳಾಸಗಳನ್ನು ತಿಳಿಸುವಂತೆ ಪ್ರಾದೇಶಿಕ ಸಾರಿಗೆ ಅಧಿಕಾರಿಗಳು, ಕೇಂದ್ರೀಯ, ಬೆಂಗಳೂರು-34 ಇವರನ್ನು ಈ ಪ್ರಾಧಿಕಾರದ ಪತ್ರ ದಿನಾಂಕ: 14.2.2003 ರಲ್ಲಿ ವಿನಂತಿಸಿಕೊಳ್ಳಲಾಗಿತ್ತು. ಸದರಿ ಪತ್ರಕ್ಕೆ ಉತ್ತರಿಸುತ್ತ ನೋಂದಣಿ ಅಧಿಕಾರಿಗಳು, ಬೆಂಗಳೂರು-34 (ಕೇಂದ್ರೀಯ) ಇವರು ತಮ್ಮ ಪತ್ರ ದಿನಾಂಕ: 28.2.2003 ರಲ್ಲಿ ಸದರಿ ವಾಹನ (ಲಾರಿ) ನಂ. ಕೆಎ-16-554 ಇದು ಶ್ರೀ ಎಂ. ಸದಾಶಿವ ತಂದೆ ಮುನಿಬೆಟ್ಟಪ್ಪ, ನಂ. 6/22, 4ನೇ ಅಡ್ಡ ರಸ್ತೆ, ಆಝಾದ ನಗರ, ಚಾಮರಾಜ ಪೇಟೆ, ಬೆಂಗಳೂರು-18 ಇವರಿಗೆ ಸೇರಿದ್ದಾಗಿ ತಿಳಿಸಿದ್ದಾರೆ.

ನಂತರ ಪ್ರಕರಣದ ವಿಚಾರಣೆಯನ್ನು ಪ್ರಾರಂಭಿಸಿ ಸರಕಾರದ ಪರವಾಗಿ ಫಿರ್ಯಾದಿ, ತನಿಖಾಧಿಕಾರಿ ಹಾಗೂ ಪಂಚರ ಹೇಳಿಕೆಯನ್ನು ಪಡೆಯಲಾಗಿದೆ ಹಾಗೂ 8 ದಾಖಲೆಗಳನ್ನು ಗುರುತಿಸಲಾಗಿದೆ. ಹಾಗೂ ಆರೋಪಿತರ ಪರ ವಾಹನ ಮಾಲಿಕರ ಹೇಳಿಕೆಯನ್ನು ಪಡೆಯಲಾಗಿದೆ.

ಈ ಪ್ರಕರಣದಲ್ಲಿ ಸರಕಾರದ ಪರವಾಗಿ ಒದಗಿಸಲಾಗಿರುವ ಸಾಕ್ಷ್ಯಾಧಾರಗಳಿಂದ ಈ ಕೆಳಗಿನ ಅಂಶಗಳನ್ನು ತೀರ್ಮಾನಿಸಬೇಕಾಗಿರುವುದು ಅಗತ್ಯವಾಗಿರುವುದರಿಂದ ಪರಿಶೀಲನಾಂಶಗಳು ಈ ಕೆಳಗಿನಂತೆ ಇರುತ್ತವೆ.

1. ದಿನಾಂಕ: 8.10.2002 ರಂದು ವಾಹನ ಲಾರಿ ಸಂಖ್ಯೆ: ಕೆಎ-16-554 ರಲ್ಲಿ ಮದ್ಯವನ್ನು ಅಕ್ರಮವಾಗಿ ಸಾಗಾಟ ಮಾಡಲಾಗಿದೆಯೇ?
2. ಸದರಿ ವಾಹನದಲ್ಲಿ ಮದ್ಯದ ಸಾಗಾಟವನ್ನು ತಮ್ಮ ತಿಳುವಳಿಕೆಗೆ ಬಾರದಂತೆ ಮಾಡಲಾಗಿತ್ತು ಎಂದು ವಾಹನ ಮಾಲಿಕರು ಸಿದ್ಧಪಡಿಸಿದ್ದಾರೆಯೆ?
3. ಜಪ್ತಾದ ವಾಹನವನ್ನು ಸರ್ಕಾರಕ್ಕೆ ಮುಟ್ಟುಗೋಲು ಹಾಕಿಕೊಳ್ಳಬಹುದೆ?

ಈ ಮೇಲೆ ತಿಳಿಸಿದ ಪರಿಶೀಲನಾಂಶಗಳನ್ನು ಲಭ್ಯವಿರುವ ಸಾಕ್ಷ್ಯಾಧಾರದ ಮೇಲೆ ಈ ಕೆಳಗಿನಂತೆ ಉತ್ತರಿಸಿರುತ್ತೇನೆ.

ಒಂದನೆಯ ಅಂಶವನ್ನು ಗುಣಾತ್ಮಕವಾಗಿ, ಎರಡನೆಯ ಅಂಶವನ್ನು ನಕಾರಾತ್ಮಕವಾಗಿ ಹಾಗೂ ಮೂರನೆಯ ಅಂಶವನ್ನು ಕೊನೆಯ ಆದೇಶದಂತೆ.

ಪ್ರಾ.ಸಾ-1 ರಾದ ಶ್ರೀ ಬಿ. ಎ. ಹಡಲಗೆ, ಡೆಪ್ಯೂಟಿ ಸುಪರಿಂಟೆಂಡೆಂಟ್ ಆಫ್ ಎಕ್ಸೈಜ್, ಇಐಬಿ, ಬೆಳಗಾಂವ ಇವರು ಈ ಪ್ರಕರಣದಲ್ಲಿ ಫಿರ್ಯಾದಿಯಾಗಿದ್ದು, ಸದರಿಯವರು ದಿನಾಂಕ: 24.07.2003 ರಂದು ಈ ಪ್ರಾಧಿಕಾರದ ಮುಂದೆ ಹಾಜರಾಗಿ ತಮ್ಮ ಹೇಳಿಕೆಯನ್ನು ನೀಡುತ್ತ, ಸದರಿಯವರು ಆಗಸ್ಟ್-2000 ರಿಂದ ಇಐಬಿ, ಬೆಳಗಾಂವಿಯಲ್ಲಿ ಅಬಕಾರಿ ಇನ್‌ಸ್ಪೆಕ್ಟರ್‌ರಾಗಿ ಕಾರ್ಯನಿರ್ವಹಿಸಿದ್ದಾಗಿ ತಿಳಿಸಿ, ದಿನಾಂಕ: 8.10.2002 ರಂದು ಖಾತ್ರಿದಾಯಕ ಬಾತ್ಮಿ ಮೇರೆಗೆ ತಮ್ಮ ಸಿಬ್ಬಂದಿ ಹಾಗೂ ಪಂಚರೊಂದಿಗೆ ಬೆಳಗಾಂವಿಯ ಗಾಂಧಿನಗರ, ಸಾಗರ ಹೋಟೆಲ್ ಹತ್ತಿರ ರಾಷ್ಟ್ರೀಯ ಹೆದ್ದಾರಿಯ ಮೇಲೆ ರಸ್ತೆಕಾವಲು ಮಾಡುತ್ತಿದ್ದಾಗ ಮಧ್ಯಾಹ್ನ ಸುಮಾರು 4.00 ಗಂಟೆಗೆ ಹುಬ್ಬಳ್ಳಿ ಕಡೆಯಿಂದ ಒಂದು ಅಶೋಕ ಲೈಲ್ಯಾಂಡ್ ವಾಹನವು ಬರುವುದನ್ನು ನೋಡಿ ನಿಲ್ಲಿಸಿ ಈ ವಾಹನದಲ್ಲಿ ಏನಿದೆ ಎಂದು ಡ್ರೈವರ್‌ನನ್ನು ಕೇಳಲಾಗಿ ಅವನು ಗಾಬರಿಗೊಂಡು ಸಂಶಯಾಸ್ಪದ ರೀತಿಯಲ್ಲಿ ವರ್ತಿಸಿದ್ದರಿಂದ ಲಾರಿಯನ್ನು ಕೂಲಂಕುಷವಾಗಿ ತಪಾಸಿಸಲಾಗಿ ಅದರಲ್ಲಿ ಮದ್ಯದ ರಟ್ಟಿನ ಪೆಟ್ಟಿಗೆಗಳು ಕಂಡು ಬಂದಿದ್ದಾಗಿ ತಿಳಿಸಿ ಸದರಿ ಮದ್ಯವನ್ನು ಸಾಗಾಟ ಮಾಡಲು ಪರ್ಮಿಟ್

ಅಥವಾ ದಾಖಲಾತಿಗಳನ್ನು ಕೇಳಲಾಗಿ ಅವನು ಅವುಗಳನ್ನು ಒದಗಿಸದೇ ಇರುವುದರಿಂದ ಸದರಿ ಮದ್ಯವು ಅಕ್ರಮವಾಗಿ ಸಾಗಾಟವಾಗುತ್ತಿರುವುದು ಖಾತ್ರಿಯಾಯಿತು ಎಂದು ತಿಳಿಸಿದ್ದಾರೆ. ಪೆಟ್ಟಿಗೆಗಳನ್ನು ಎಣಿಕೆ ಮಾಡಿದಾಗ ಒಟ್ಟು 620 ಪೆಟ್ಟಿಗೆಗಳಿದ್ದು ಅವುಗಳನ್ನು ಜಪ್ತಿ ಮಾಡಿದ್ದಾಗಿ ತಿಳಿಸಿದ್ದಾರೆ. ನಂತರ ಸದರಿ ಪೆಟ್ಟಿಗೆಗಳಿಂದ ಒಟ್ಟು 19 ಬಾಟಲುಗಳನ್ನು ರಸಾಯನಿಕ ಪರೀಕ್ಷೆಗಾಗಿ ತೆಗೆದು ಅವುಗಳನ್ನು ಸೀಲ್ ಮಾಡಿ ಅವರ ಹಾಗೂ ಪಂಚರ ಸಹಿ ಚೀಟಿಗಳನ್ನು ಅಂಟಿಸಿದ್ದಾಗಿ ತಿಳಿಸಿದ್ದಾರೆ. ಅದರಂತೆಯೇ ಸದರಿ ವಾಹನವನ್ನು ಸಹ ಜಪ್ತಿ ಮಾಡಿ ಆರೋಪಿತರನ್ನು ದಸ್ತಗಿರಿ ಮಾಡಿದ್ದಾಗಿ ಹೇಳಿದ್ದಾರೆ. ಹಾಗೂ ಸದರಿ ಸ್ಥಳದಲ್ಲಿಯೇ ಮಧ್ಯಾಹ್ನ 4.00 ಗಂಟೆಯಿಂದ 6.00 ಗಂಟೆಯ ವರೆಗೆ ಪಂಚನಾಮೆಯನ್ನು ತಯಾರಿಸಿದ್ದಾಗಿ ತಿಳಿಸಿದ್ದಾರೆ. ಸದರಿ ಪಂಚನಾಮೆಯ ಪ್ರತಿಯನ್ನು ನಿಪಿ-1 ಎಂದು ಗುರುತಿಸಲಾಗಿದ್ದು ಸದರಿಯವರ ಸಹಿಯನ್ನು ನಿಪಿ-1(ಎ) ಎಂದು ಗುರುತಿಸಲಾಗಿದೆ. ನಂತರ ಸದರಿಯವರು ತಮ್ಮ ಕಛೇರಿಗೆ ಬಂದು ಸರಕಾರದ ಪರ ಫಿರ್ಯಾದಿಯನ್ನು ಸಲ್ಲಿಸಿ ಈ ಕುರಿತು ಗುನ್ನೆ ನಂ. 4/2002-03 ನ್ನು ದಾಖಲಿಸಿದ್ದಾಗಿ ಹೇಳಿದ್ದಾರೆ. ಸದರಿ ಫಿರ್ಯಾದಿನ ಕಾರ್ಬನ್ ಪ್ರತಿಯನ್ನು ನಿಪಿ-2 ಎಂದು ಗುರುತಿಸಲಾಗಿದ್ದು ಸದರಿಯವರ ಸಹಿಯನ್ನು ನಿಪಿ-2(ಎ) ಎಂದು ಗುರುತಿಸಲಾಗಿದೆ. ಶೋಧನಾ ವಾರಂಟ್‌ವಿಲ್ಲದೇ ಅಬಕಾರಿ ಕಾಯ್ದೆ ಕಲಂ 54ರ ಅಡಿಯಲ್ಲಿ ಅಧಿಕಾರ ಇರುವುದರಿಂದ ಈ ಕುರಿತು ನ್ಯಾಯಾಲಯಕ್ಕೆ ವರದಿ ಸಲ್ಲಿಸಿದ್ದಾಗಿ ತಿಳಿಸಿದ್ದಾರೆ. ಸದರಿ ವರದಿಯ ಕಾರ್ಬನ್ ಪ್ರತಿಯನ್ನು ನಿಪಿ-3 ಎಂದು ಗುರುತಿಸಲಾಗಿದೆ ಹಾಗೂ ಅದರ ಮೇಲಿನ ಅವರ ಸಹಿಯನ್ನು ನಿಪಿ-3(ಎ) ಎಂದು ಗುರುತಿಸಲಾಗಿದೆ. ಪ್ರಥಮ ವರ್ತಮಾನ ವರದಿಯ ಕಾರ್ಬನ್ ಪ್ರತಿಯನ್ನು ನಿಪಿ-4 ಎಂದು ಹಾಗೂ ಸದರಿಯವರ ಸಹಿಯನ್ನು ನಿಪಿ-4(ಎ) ಎಂದು ಗುರುತಿಸಲಾಗಿದೆ. ಜಪ್ತಿ ಮಾಡಿದ ಸ್ವತ್ತಿನ ಪಟ್ಟಿಯನ್ನು ತಾಬಾದಲ್ಲಿ ಇಟ್ಟುಕೊಳ್ಳಲು ಅಧಿಕೃತ ಅಧಿಕಾರಿಯವರಿಗೆ ಅನುಮತಿಯನ್ನು ನೀಡಲು ವಿನಂತಿಸಿಕೊಂಡಿದ್ದು, ಅದರ ಕಾರ್ಬನ್ ಪ್ರತಿಯನ್ನು ನಿಪಿ-5 ಎಂತಲೂ ಅದರ ಮೇಲಿನ ಅವರ ಸಹಿಯನ್ನು ನಿಪಿ-5(ಎ) ಎಂತಲೂ ಗುರುತಿಸಲಾಗಿದೆ. ನಂತರ ಸದರಿ ಪ್ರಕರಣವನ್ನು ಮುಂದಿನ ತನಿಖೆಗಾಗಿ ಅಬಕಾರಿ ಸಬ್ ಇನ್‌ಸ್ಪೆಕ್ಟರ್, ಉತ್ತರ ಉಪ ವಲಯ ನಂ-1, ಬೆಳಗಾಂವ ಇವರಿಗೆ ಒಪ್ಪಿಸಿದ್ದಾಗಿ ತಿಳಿಸಿದ್ದಾರೆ.

ನಂತರ ಸದರಿಯವರು ವಾಹನ ಮಾಲಿಕರ ಪರ ವಕೀಲರ ಪಾಟೀ ಸವಾಲಿಗೆ ಉತ್ತರಿಸುತ್ತ ಗುನ್ನೆಯ ವರ್ತಮಾನ ತಮಗೆ ಮಧ್ಯಾಹ್ನ 2.45ರ ಸುಮಾರಿಗೆ ಬಂದಿದ್ದಾಗಿಯೂ ಆಗ ತಾವು ಕಛೇರಿಯಲ್ಲಿದ್ದಾಗಿ ತಿಳಿಸಿದ್ದಾರೆ. ಸದರಿ ವಿಷಯವನ್ನು ದಿನಚರಿಯಲ್ಲಿ ನಮೂದು ಮಾಡಿರುವುದಿಲ್ಲವೆಂದು ಹೇಳಿದ್ದಾರೆ. ಸದರಿಯವರ ಕಛೇರಿ, ಸಾಗರ ಹೋಟೆಲದಿಂದ $1^1/_2$ ರ ಫರ್ಲಾಂಗ್ ಅಂತರದ ಮೇಲೆ ಹಾಗೂ ಜೆ.ಎಂ.ಎಫ್.ಸಿ. ನ್ಯಾಯಾಲಯವು 1 ಫರ್ಲಾಂಗ್ ಅಂತರದ ಮೇಲೆ ಇದೆಯೆಂದು ತಿಳಿಸಿದ್ದಾರೆ. ಶೋಧನೆಯ ಪೂರ್ವದಲ್ಲಿ ಅನುಮತಿಯನ್ನು ಪಡೆಯಬೇಕಾದರೆ ಬಾತ್ಮಿಯ ಪ್ರಚಾರವಾಗುವ ಸಾಧ್ಯತೆ ಇರುವುದರಿಂದ ಹಾಗೂ ಗುನ್ನೆಯನ್ನು ಪತ್ತೆ ಹೆಚ್ಚಲು ವಿಳಂಬ ಆಗುವ ಸಾಧ್ಯತೆ ಇರುವುದರಿಂದ ಶೋಧನೆಯ ಮೊದಲು ನ್ಯಾಯಾಲಯದಿಂದ ಅನುಮತಿಯನ್ನು ಪಡೆಯಲಿಲ್ಲವೆಂದು ತಿಳಿಸಿದ್ದಾರೆ. ಈ ಸಂಗತಿಯನ್ನು ಪಂಚನಾಮೆಯಲ್ಲಿ ಅಥವಾ ಫಿರ್ಯಾದಿನಲ್ಲಿ ನಮೂದಿಸಿರುವುದಿಲ್ಲವೆಂದು ತಿಳಿಸಿದ್ದಾರೆ. ಸದರಿಯವರು ಸರಕಾರಿ ವಾಹನದಲ್ಲಿ ಕಛೇರಿಯನ್ನು ಮಧ್ಯಾಹ್ನ 3.15ಕ್ಕೆ ಬಿಟ್ಟು ಸದರಿ ಸ್ಥಳಕ್ಕೆ 3.30 ಕ್ಕೆ ಮುಟ್ಟಿದ್ದಾಗಿ ತಿಳಿಸಿದ್ದಾರೆ. 3.30 ರಿಂದ 4.00 ಗಂಟೆಯ ಅವಧಿಯಲ್ಲಿ ಬೇರೆ ಯಾವುದೇ ವಾಹನಗಳನ್ನು ತಪಾಸಣೆ ಮಾಡಿರುವುದಿಲ್ಲವೆಂದು ಹೇಳಿದ್ದಾರೆ. ಸ್ಥಾಯಿ ಜನರನ್ನು ಪಂಚರೆಂದು ಬರಲು ಪ್ರಯತ್ನಿಸಿದರೂ ಅಲ್ಲಿಯ ಜನರು ಒಪ್ಪಲಿಲ್ಲ ಎಂದು ತಿಳಿಸಿದ್ದಾರೆ. ಪಂಚನಾಮೆಯಲ್ಲಿ ಪಂಚನಾಮೆಯನ್ನು ಬರೆದವರ ಹೆಸರನ್ನು ಹಾಗೂ ಸಹಿಯನ್ನು ಪಡೆದಿರುವುದಿಲ್ಲ ಎಂದು ಹೇಳಿದ್ದಾರೆ. ಪಂಚನಾಮೆಯನ್ನು ಕಛೇರಿಯಲ್ಲಿ ಬರೆಯಲಾಗಿದೆ ಎಂದು ಹೇಳುವುದು ಸರಿಯಲ್ಲವೆಂದು ಹಾಗೂ ಪಂಚರು ಅಬಕಾರಿ ಪ್ರಕರಣಗಳಲ್ಲಿ ಪಂಚರೆಂದು ಕೆಲಸ ಮಾಡುವವರು ಎಂದರೆ ಸರಿಯಲ್ಲವೆಂದು ಹೇಳಿದ್ದಾರೆ. ಫಿರ್ಯಾದನ್ನು ಅವರೇ ಶ್ರೀ ದೊಡ್ಡಮನಿಯವರಿಂದ ಬರೆಸಿದ್ದಾಗಿ ತಿಳಿಸಿ ಈ ಕುರಿತು ಶ್ರೀ ದೊಡ್ಡಮನಿಯವರ ಹೇಳಿಕೆ ಪಡೆದಿಲ್ಲವೆಂದು ಹೇಳಿದ್ದಾರೆ. ಪ್ರಥಮ ವರ್ತಮಾನ ವರದಿಯಲ್ಲಿ ಮದ್ಯಗಳು ತಯಾರಾದ ಡಿಸ್ಟಿಲರಿಗಳ ಹೆಸರುಗಳನ್ನು ನಮೂದಿಸಿಲ್ಲವೆಂದು ಹೇಳಿ ಮುದ್ದೆಮಾಲನ್ನು ತಾಬಾದಲ್ಲಿಟ್ಟುಕೊಳ್ಳಲು ಅದೇ ದಿನ ಅಧಿಕೃತ ಅಧಿಕಾರಿಯವರಿಗೆ ಬರೆದಿದ್ದಾಗಿ ತಿಳಿಸಿದ್ದಾರೆ. ಇಲಾಖೆಯಲ್ಲಿರುವ ವಾರಸುದಾರರಿಲ್ಲದ ಮದ್ಯವನ್ನು ವಿಲೇವಾರಿ ಮಾಡಲು ಮೇಲಾಧಿಕಾರಿಗಳ ಮಾತನ್ನು ಕೇಳಿ ವಾಹನ ಚಾಲಕನ ಮೇಲೆ ಸುಳ್ಳು ಪ್ರಕರಣ ದಾಖಲಿಸಿದ್ದೇನೆ ಎನ್ನುವುದು ಸರಿಯಲ್ಲ ಎಂದು ಹೇಳಿದ್ದಾರೆ. ದಾಳಿ ಮಾಡಬೇಕಾದರೆ ನಾನು ಸಿಬ್ಬಂದಿಯವರ ಜೊತೆ ಹೋಗಿರುವ ಕುರಿತು ಅವರ ಹೇಳಿಕೆಯನ್ನು ಪಡೆದಿದ್ದೇನೆ ಎಂದು ಹೇಳಿದ್ದಾರೆ. ಸದರಿ ವಾಹನ ಸಂ. ಕೆಎ-16-554 ರಲ್ಲಿ ಮದ್ಯ ಸಿಕ್ಕಿರುವುದಿಲ್ಲವೆಂದು ಹೇಳುವುದು ಸರಿಯಲ್ಲ ಹಾಗೂ ಅಂಕಿ ಸಂಖ್ಯೆಗಾಗಿ ಈ ಕೇಸನ್ನು ಮಾಡಿದ್ದೇನೆ ಎನ್ನುವುದು ಸರಿಯಲ್ಲವೆಂದು ಹೇಳಿದ್ದಾರೆ.

ನಂತರ ಶ್ರೀ ಜಿ. ಬಿ. ಗುರವ, ಅಬಕಾರಿ ಸಬ್ ಇನ್‌ಸ್ಪೆಕ್ಟರ್, ಉತ್ತರ ಉಪ ವಲಯ ನಂ-1. ಬೆಳಗಾಂವ ಇವರ ಹೇಳಿಕೆಯನ್ನು ಪ್ರಾ.ಸಾ-2 ಆಗಿ ಪಡೆಯಲಾಯಿತು. ಸದರಿಯವರು ಈ ಪ್ರಕರಣದಲ್ಲಿ ತನಿಖಾಧಿಕಾರಿಗಳಾಗಿದ್ದು, ಸದರಿಯವರು ದಿನಾಂಕ: 24.07.2003 ರಂದು ಈ ಪ್ರಾಧಿಕಾರದ ಮುಂದೆ ಹಾಜರಾಗಿ ತಮ್ಮ ಹೇಳಿಕೆಯನ್ನು ನೀಡುತ್ತ, ಸದರಿಯವರು ದಿನಾಂಕ: 6.10.2000 ರಿಂದ ಉತ್ತರ ಉಪವಲಯ ನಂ-1, ಬೆಳಗಾಂವಿಯಲ್ಲಿ ಸಬ್ ಇನ್‌ಸ್ಪೆಕ್ಟರ್‌ರಾಗಿ ಕಾರ್ಯನಿರ್ವಹಿಸುತ್ತಿರುವುದಾಗಿ ತಿಳಿಸಿದ್ದಾರೆ. ಸದರಿ ಪ್ರಕರಣವನ್ನು ಮುಂದಿನ ತನಿಖೆಗಾಗಿ ಪ್ರಾ.ಸಾ-1 ರವರಿಂದ ದಿನಾಂಕ: 21.11.2002 ರಂದು ಕಾಗದ ಪತ್ರ ಹಾಗೂ ಮದ್ಯದೊಡನೆ ಪಡೆದಿದ್ದಾಗಿ ತಿಳಿಸಿದ್ದಾರೆ. ಸದರಿ ಗುನ್ನೆಗೆ ಸಂಬಂಧಿಸಿದ ಸ್ಯಾಂಪಲ್ ಬಾಟಲುಗಳನ್ನು ಅಬಕಾರಿ ರಕ್ಷಕರಾದ ಶ್ರೀ ಬಿ. ಬಿ. ಕಾಂಬಳೆ ಇವರೊಂದಿಗೆ ದಿನಾಂಕ: 21.11.2002 ರಂದು ಬೆಂಗಳೂರಿನ ರಸಾಯನಿಕ ತಜ್ಞರಿಗೆ ಕಳುಹಿಸಿ ಅವರಿಂದ ವರದಿಯನ್ನು ದಿನಾಂಕ: 23.11.2002 ರಂದು ಪಡೆದಿದ್ದಾಗಿ ತಿಳಿಸಿದ್ದಾರೆ. ರಸಾಯನಿಕ ವರದಿಯನ್ನು ನಿಪಿ-6 ಎಂದು ಹಾಗೂ ಅದರ ಮೇಲಿನ ಅವರ ಸಹಿಯನ್ನು ನಿಪಿ-6(ಎ) ಎಂದು ಗುರುತಿಸಲಾಗಿದೆ. ಸದರಿ ಸ್ಯಾಂಪಲ್ ಬಾಟಲುಗಳಲ್ಲಿ ಮದ್ಯಸಾರದ ಅಂಶವಿರುವುದಾಗಿಯೂ ಹಾಗೂ ಅದು ಮಾನವನ ಸೇವನೆಗೆ ಯೋಗ್ಯವಿದೆ ಎಂದು ವರದಿ ಬಂದಿದ್ದರಿಂದ ಸದರಿ ಮದ್ಯವನ್ನು ಮುಟ್ಟುಗೋಲು ಹಾಕಿಕೊಳ್ಳಲು ಅಧಿಕೃತ ಅಧಿಕಾರಿಗಳಿಗೆ ಬರೆದಿದ್ದಾಗಿ ತಿಳಿಸಿದ್ದಾರೆ. ಸದರಿ ಪತ್ರವನ್ನು ನಿಪಿ-7 ಎಂದು ಹಾಗೂ ಅದರ ಮೇಲಿನ ಅವರ ಸಹಿಯನ್ನು ನಿಪಿ-7(ಎ) ಎಂದು ಗುರುತಿಸಲಾಗಿದೆ. ಅಧಿಕೃತ ಅಧಿಕಾರಿಗಳು ನೀಡಿರುವ ಮುಟ್ಟುಗೋಲು ಆದೇಶ ನಂ. ಇಎಕ್ಸ್‌ಇ:ಸಿಆರ್‌ಎಂ:ಡಿಟಿಸಿಆರ್:575:2002-03 ದಿನಾಂಕ: 26.11.2002 ರಂತೆ

ಸದರಿ ಮದ್ಯವನ್ನು ಸನ್ನದುದಾರರಲ್ಲಿ ವಿಲೇವಾರಿ ಮಾಡಿದ್ದಾಗಿಯೂ ಅದರಿಂದ ಬಂದ ಹಣವನ್ನು ಸರಕಾರಕ್ಕೆ ಭರಣ ಮಾಡಿದ್ದಾಗಿಯೂ ಹೇಳಿದ್ದಾರೆ. ಸದರಿ ಆದೇಶದ ಪ್ರತಿಯನ್ನು ನಿಪಿ-8 ಎಂದು ಗುರುತಿಸಲಾಗಿದೆ. ಆದ್ದರಿಂದ ಮುಟ್ಟುಗೋಲು ಹಾಕಿಕೊಂಡಿರುವ ಮದ್ಯವನ್ನು ಅಥವಾ ಅದನ್ನು ಮಾರಿ ಬಂದ ಹಣವನ್ನು ಮತ್ತು ಈ ಪ್ರಕರಣದಲ್ಲಿ ಜಪ್ತಾದ ವಾಹನವನ್ನು ಸರಕಾರಕ್ಕೆ ಮುಟ್ಟುಗೋಲು ಹಾಕಿಕೊಳ್ಳಲು ವಿನಂತಿಸಿದ್ದಾರೆ.

ನಂತರ ಸದರಿಯವರು ವಾಹನ ಮಾಲಿಕರ ಪರ ವಕೀಲರ ಪಾಟೀ ಸವಾಲಿಗೆ ಉತ್ತರಿಸುತ್ತ ವಾಹನದಲ್ಲಿರುವ ಮದ್ಯದ ಬಗ್ಗೆ ಅಥವಾ ಅದರ ಮಾಲಿಕರ ಕುರಿತು ತಾವು ತನಿಖೆ ಮಾಡಿರುವುದಿಲ್ಲವೆಂದು ತಿಳಿಸಿದ್ದಾರೆ. ಈ ಕುರಿತು ರಸಾಯನಿಕ ತಜ್ಞರ ಅಥವಾ ಬೇರೆ ಯಾರದೇ ಆಗಲಿ ಹೇಳಿಕೆಯನ್ನು ಪಡೆದಿರುವುದಿಲ್ಲವೆಂದು ಹೇಳಿದ್ದಾರೆ. ತಾವು ಮೇಲಾಧಿಕಾರಿಗಳ ಮಾತು ಕೇಳಿ ವಾಹನ ಮಾಲಿಕರ ಮೇಲೆ ಸುಳ್ಳು ಪ್ರಕರಣವನ್ನು ತಯಾರಿಸಿದ್ದೇನೆ ಎನ್ನುವುದು ಸರಿಯಲ್ಲವೆಂದು ಹೇಳಿದ್ದಾರೆ.

ನಂತರ ಶ್ರೀ ಮಾಣಿಕ ವಾಸುದೇವ ಶೆಟ್ಟಿ ಇವರ ಹೇಳಿಕೆಯನ್ನು ಪ್ರಾ.ಸಾ-3 ಆಗಿ ಪಡೆಯಲಾಯಿತು. ಸದರಿಯವರು ಈ ಪ್ರಕರಣದ ಪಂಚರಾಗಿದ್ದು, ದಿನಾಂಕ: 4.12.2003 ರಂದು ಈ ಪ್ರಾಧಿಕಾರದ ಮುಂದೆ ಹಾಜರಾಗಿ ತಮ್ಮ ಹೇಳಿಕೆಯನ್ನು ನೀಡುತ್ತ, ದಿನಾಂಕ: 8.10.2002 ರಂದು ಸದರಿಯವರಿಗೆ ಪ್ರಾ.ಸಾ-1 ರಾದ ಶ್ರೀ ಬಿ. ಎ. ಹಡಲಗೆ ಇವರು ತಮ್ಮ ಸಿಬ್ಬಂದಿ ಹಾಗೂ ಇನ್ನೊಬ್ಬ ಪಂಚರಾದ ಶ್ರೀ ರಾಮಚಂದ್ರ ವೈಜು ಜಾಧವ ಇವರನ್ನು ಕರೆದುಕೊಂಡು ರಾಷ್ಟ್ರೀಯ ಹೆದ್ದಾರಿ ನಂ.4 ರ ಮೇಲೆ ಸಾಗರ ಹೊಟೆಲ್ ಹತ್ತಿರ ರಸ್ತೆಕಾವಲು ಮಾಡುತ್ತಿದ್ದಾಗ ಮಧ್ಯಾಹ್ನ 4.00 ಗಂಟೆಗೆ ಹುಬ್ಬಳ್ಳಿ ಕಡೆಯಿಂದ ಪೂನಾ ಕಡೆಗೆ ಒಂದು ಅಶೋಕ ಲೈಲ್ಯಾಂಡ್ ವಾಹನ ಬರುವುದನ್ನು ನೋಡಿ ನಿಲ್ಲಿಸಿ ಡ್ರೈವರ್‌ನಿಗೆ ವಿಚಾರಣೆ ಮಾಡಿದಾಗ ಅವನು ಗಾಬರಿಗೊಂಡು ಸಂಶಯಾಸ್ಪದ ರೀತಿಯಲ್ಲಿ ವರ್ತಿಸಿದ್ದರಿಂದ ಸದರಿ ವಾಹನವನ್ನು ತಪಾಸಿಸಿದಾಗ ರಟ್ಟಿನ ಪೆಟ್ಟಿಗೆಗಳು ಕಂಡು ಬಂದದ್ದಾಗಿಯೂ ಅವುಗಳನ್ನು ಬಿಚ್ಚಿ ನೋಡಲಾಗಿ ಅವುಗಳಲ್ಲಿ ಮದ್ಯದ ಬಾಟಲುಗಳು ಇದ್ದುದ್ದಾಗಿ ಹೇಳಿದ್ದಾರೆ. ಸದರಿ ಮದ್ಯವನ್ನು ಸಾಗಾಟ ಮಾಡಲು ದಾಖಲಾತಿಗಳು ಇವೆಯೋ ಎಂದು ಕೇಳಲಾಗಿ ಅವನು ಇಲ್ಲ ಎಂದು ಹೇಳಿದ್ದರಿಂದ ಸದರಿ ಮದ್ಯವು ಅಕ್ರಮವಾಗಿ ಸಾಗಾಟ ಆಗುತ್ತಿರುವುದು ಖಾತ್ರಿಯಾಗಿದ್ದಾಗಿ ತಿಳಿಸಿದ್ದಾರೆ. ಅವುಗಳನ್ನು ನೋಡಲಾಗಿ ಅದರಲ್ಲಿ ಒಟ್ಟು 620 ಪೆಟ್ಟಿಗೆಗಳಿದ್ದು, ಅವುಗಳನ್ನು ಸದರಿಯವರ ಸಮಕ್ಷಮದಲ್ಲಿ ಜಪ್ತಿಮಾಡಿದ್ದಾಗಿ ತಿಳಿಸಿದ್ದಾರೆ. ಅವುಗಳಲ್ಲಿ ಒಟ್ಟು 19 ಬಾಟಲಿಗಳನ್ನು ರಸಾಯನಿಕ ಪರೀಕ್ಷೆಗಾಗಿ ತೆಗೆದು ಅವುಗಳನ್ನು ಅವರ ಸಮಕ್ಷಮದಲ್ಲಿ ಸೀಲು ಮಾಡಿದ್ದಾಗಿ ತಿಳಿಸಿದ್ದಾರೆ. ವಾಹನದ ನಂ. ಕೆಎ-16-554 ಇದ್ದು ಅದನ್ನು ಸಹ ಜಪ್ತಿ ಮಾಡಿದ್ದಾಗಿ ಹಾಗೂ ಆರೋಪಿತನನ್ನು ದಸ್ತಗಿರಿ ಮಾಡಿದ್ದಾಗಿ ತಿಳಿಸಿದ್ದಾರೆ. ಈ ಕುರಿತು ಸ್ಥಳದಲ್ಲಿಯೇ ಪಂಚನಾಮೆಯನ್ನು ತಯಾರಿಸಿ ಅದರ ಮೇಲೆ ಅವರ ಸಹಿ ಪಡೆದಿದ್ದಾಗಿ ತಿಳಿಸಿದ್ದಾರೆ. ಅವರ ಸಹಿಯನ್ನು ನಿಪಿ-1(ಬಿ) ಎಂದು ಗುರುತಿಸಿದ್ದು, ಸದರಿ ಸಹಿಯನ್ನು ಅವರು ಗುರುತಿಸಿದ್ದಾಗಿ ತಿಳಿಸಿದ್ದಾರೆ.

ನಂತರ ಸದರಿಯವರು ವಾಹನ ಮಾಲಿಕರ ಪರ ವಕೀಲರ ಪಾಟೀ ಸವಾಲಿಗೆ ಉತ್ತರಿಸುತ್ತ ಸದರಿಯವರನ್ನು ಕರೆಯಲಿಕ್ಕೆ ಬಂದಾಗ ಮಧ್ಯಾಹ್ನ 2.30 ಗಂಟೆಯಾಗಿದ್ದಾಗಿಯೂ ಅವರು ಅಬಕಾರಿ ಕಛೇರಿಗೆ ಬಂದಾಗ ಸುಮಾರು 3.30 ಗಂಟೆಯಾಗಿದ್ದಾಗಿ ತಿಳಿಸಿದ್ದಾರೆ. ಹಾಗೂ ಸಾಗರ ಹೋಟೆಲ್ ತಲುಪಿದಾಗ ಸುಮಾರು 4.00 ಗಂಟೆಯಾಗಿದ್ದಾಗಿ ತಿಳಿಸಿದ್ದಾರೆ. ಪ್ರಕರಣದ ವಾಹನವನ್ನು ಬಿಟ್ಟು ಬೇರೆ ಯಾವುದೇ ವಾಹನಗಳನ್ನು ತಪಾಸಣೆ ಮಾಡಿಲ್ಲವೆಂದು ಹೇಳಿದ್ದಾರೆ. ಗಾಡಿಯ ಬಣ್ಣ ಬ್ರೌನ್ ಇತ್ತು ಎಂದು ಹೇಳಿದ್ದಾರೆ. ತನಗೆ ಕನ್ನಡ ಓದಲು ಬರುವುದಾಗಿಯೂ, ಅಂದು ಪಂಚನಾಮೆಯನ್ನು ಓದಿಲ್ಲವೆಂತಲೂ, ಪಂಚನಾಮೆಯನ್ನು ಯಾರು ಬರೆದಿರುವರು ಎಂಬುದು ತನಗೆ ಗೊತ್ತಿಲ್ಲವೆಂತಲೂ, ಅವರಿಗೆ ಪಂಚನಾಮೆಯನ್ನು ಯಾರೂ ಓದಿ ಹೇಳಿಲ್ಲವೆಂದು ತಿಳಿಸಿದ್ದಾರೆ. ಸದರಿಯವರು 8-10 ಕೇಸುಗಳಲ್ಲಿ ಪಂಚನೆಂದು ಕೆಲಸಮಾಡಿದ್ದಾಗಿ ತಿಳಿಸಿದ್ದಾರೆ. ಸದರಿಯವರ ಸಮಕ್ಷಮದಲ್ಲಿ ವಾಹನವನ್ನು ತಪಾಸಿಸಿದ್ದಾಗಿಯೂ ಹಾಗೂ ಅವರ ಸಮಕ್ಷಮದಲ್ಲಿ ಮದ್ಯವನ್ನು ಜಪ್ತಿ ಮಾಡಿದ್ದಾಗಿ ತಿಳಿಸಿದ್ದಾರೆ. ಹಾಗೂ ಅವರ ಸಮಕ್ಷಮದಲ್ಲಿಯೇ ಆರೋಪಿತನನ್ನು ದಸ್ತಗಿರಿ ಮಾಡಿದ್ದಾಗಿ ತಿಳಿಸಿದ್ದಾರೆ. ಪ್ರಾ.ಸಾ-1 ರವರ ಮಾತನ್ನು ಕೇಳಿ ತಾವು ಕಛೇರಿಯಲ್ಲಿ ಸಹಿಮಾಡಿದ್ದೇನೆ ಎನ್ನುವುದು ಸರಿಯಲ್ಲ ಎಂದು ಹೇಳಿದ್ದಾರೆ. ಸಾಗರ ಹೋಟೆಲ್ ಎದುರಿಗೆ ವಾಹನ ಇರಲಿಲ್ಲ ಮತ್ತು ಮದ್ಯ ಇರಲಿಲ್ಲ ಅಥವಾ ಈ ಪ್ರಕರಣದಲ್ಲಿ ತನಗೆ ಏನೂ ಗೊತ್ತಿಲ್ಲ ಎನ್ನುವುದು ಸರಿಯಲ್ಲ ಎಂದು ಹೇಳಿದ್ದಾರೆ. ಅಬಕಾರಿ ಇಲಾಖೆಯ ಅಧಿಕಾರಿಗಳ ಮಾತನ್ನು ಕೇಳಿ ತಾನು ಸುಳ್ಳು ಸಾಕ್ಷಿ ನೀಡುತ್ತಿದ್ದೇನೆ ಎನ್ನುವುದು ಸರಿಯಲ್ಲ ಎಂದು ಹೇಳಿದ್ದಾರೆ.

ಈ ಪ್ರಕರಣದಲ್ಲಿ ಪ್ರಾ.ಸಾ-1 ಪ್ರಾ.ಸಾ-2 ಮತ್ತು ಪ್ರಾ.ಸಾ-3 ಇವರ ಹೇಳಿಕೆಯ ಮೇಲೆ ದಿನಾಂಕ: 8.10.2002 ರಂದು ವಾಹನ ಅಶೋಕ ಲೈಲ್ಯಾಂಡ್ ನಂ. ಕೆಎ-16-554 ರಲ್ಲಿ ಮದ್ಯದ ಅಕ್ರಮ ಸಾಗಾಣಿಕೆಯಾಗಿರುವುದು ನಿಜವೆಂದು ಕಂಡು ಬರುತ್ತದೆ. ಆದ್ದರಿಂದ ಒಂದನೆಯ ಅಂಶವನ್ನು ಗುಣಾತ್ಮಕವಾಗಿ ಪರಿಗಣಿಸಲಾಗಿದೆ.

ಶ್ರೀ ಎಂ. ಸದಾಶಿವ ತಂದೆ ಮುನಿಬೆಟ್ಟಪ್ಪ, ಚಾಮರಾಜಪೇಟೆ, ಬೆಂಗಳೂರು ಇವರು ವಾಹನ ಮಾಲಿಕರಿದ್ದು, ಇವರ ಹೇಳಿಕೆಯನ್ನು ಡಿ.ಡಬ್ಲ್ಯೂ-1 ಆಗಿ ಪಡೆಯಲಾಯಿತು. ಸದರಿಯವರು ದಿನಾಂಕ: 04.12.2003 ರಂದು ಈ ಪ್ರಾಧಿಕಾರದ ಮುಂದೆ ಹಾಜರಾಗಿ ತಮ್ಮ ಹೇಳಿಕೆಯನ್ನು ನೀಡುತ್ತ, ಈ ಪ್ರಕರಣದಲ್ಲಿ ತಾನು ವಾಹನ ಮಾಲಿಕನಿದ್ದು ಸದರಿ ವಾಹನದ ಮಾಲಿಕತ್ವ ಕುರಿತು ಆರ್.ಸಿ. ದಾಖಲಾತಿಗಳನ್ನು ಹಾಜರು ಮಾಡಿರುವುದಾಗಿ ತಿಳಿಸಿದ್ದಾರೆ. ಸದರಿ ವಾಹನಕ್ಕೆ ಮೋಹನ ಕೆಂಪೇಗೌಡ ಎಂಬುವವರು ಚಾಲಕನಿದ್ದುದಾಗಿ ತಿಳಿಸಿದ್ದಾರೆ. ಸದರಿ ವಾಹನ ತನ್ನ ದೇಖರೇಖೆಯಲ್ಲಿಯೇ ಚಲಿಸುತ್ತಿರುವುದಾಗಿ ತಿಳಿಸಿ, ಸದರಿ ವಾಹನವನ್ನು ಸಾಮಾನುಗಳನ್ನು ಸರಬರಾಜು ಮಾಡಲು ಇಟ್ಟಿರುವುದಾಗಿ ಹೇಳಿದ್ದಾರೆ. ಸದರಿ ವಾಹನವು ಮದ್ಯವನ್ನು ಸಾಗಾಟ ಮಾಡುವಾಗ ಸಿಕ್ಕಿರುತ್ತದೆ ಎಂದು ಹೇಳುವುದು ಸರಿಯಲ್ಲ ವೆಂತಲೂ, ಸದರಿ ವಾಹನವು ಜಪ್ತಿಯಾದ ಒಂದು ವಾರದ ನಂತರ ಸದರಿಯವರಿಗೆ ಗೊತ್ತಾಗಿದ್ದಾಗಿ ತಿಳಿಸಿದ್ದಾರೆ. ಅಬಕಾರಿ ಇಲಾಖೆಯಿಂದ ನೀಡಿದ ನೋಟೀಸಿಗೆ ಉತ್ತರವನ್ನು ನೀಡಿದ್ದಾಗಿ ಹೇಳಿದ್ದಾರೆ. ಸದರಿಯವರ ಅಬಕಾರಿ ಕಾಯ್ದೆಗಳನ್ನು ಉಲ್ಲಂಘನೆ ಮಾಡಿಲ್ಲದಿರುವುದರಿಂದ ತನ್ನ ವಾಹನವನ್ನು ಬಿಡುಗಡೆ ಮಾಡಲು ವಿನಂತಿಸಿಕೊಂಡಿದ್ದಾರೆ.

ನಂತರ ಸದರಿಯವರು ಎ.ಡಿ.ಪಿ. ಯವರ ಪಾಟೀ ಸವಾಲಿಗೆ ಉತ್ತರಿಸುತ್ತ ತನ್ನ ವಾಹನದಲ್ಲಿ ಮದ್ಯ ಸಾಗಾಟ ಆಗುವುದು ಸದರಿಯವರಿಗೆ ಗೊತ್ತಿತ್ತು ಎನ್ನುವುದು ಸರಿಯಲ್ಲ ಎಂದು ಹೇಳಿದ್ದಾರೆ. ಈ ಪ್ರಕರಣದ ಒಂದು ವಾರದ ನಂತರ ಅವರಿಗೆ ವಿಷಯ ಗೊತ್ತಾಗಿದ್ದಾಗಿ ಹೇಳಿದ್ದಾರೆ. ಮದ್ಯ ಸಾಗಾಟ ಮಾಡುತ್ತಿದ್ದುದು ತನಗೆ ಗೊತ್ತಿತ್ತು ಎಂದು ಹೇಳುವುದು ಸರಿಯಲ್ಲ ಎಂದು ಹೇಳಿದ್ದಾರೆ. ತಾನು ಅಬಕಾರಿ ಕಾಯ್ದೆಯನ್ನು ಉಲ್ಲಂಘಿಸಿ ಮದ್ಯವನ್ನು ಸಾಗಾಟ ಮಾಡಿರುವುದರಿಂದ ಸದರಿ ವಾಹನವನ್ನು ಮುಟ್ಟುಗೋಲು ಹಾಕಿಕೊಳ್ಳಬೇಕು ಎಂದು ಹೇಳುವುದು ಸರಿಯಲ್ಲ ಎಂದು ಹೇಳಿದ್ದಾರೆ. ಸದರಿಯವರು ತಿಳಿದು ಅಪರಾಧವನ್ನು ಮಾಡಿರುತ್ತೇನೆ ಎಂದು ಹೇಳುವುದು ಸರಿಯಲ್ಲ ಎಂದು ಹೇಳಿದ್ದಾರೆ. ತಾನು ಅಬಕಾರಿ ಇಲಾಖೆಯ ನೋಟೀಸಿಗೆ ಸುಳ್ಳು ಮಾಹಿತಿಯನ್ನು ನೀಡಿ ಉತ್ತರವನ್ನು ಕೊಟ್ಟಿರುತ್ತೇನೆ ಎಂದು ಹೇಳುವುದು ಸರಿಯಲ್ಲವೆಂದು ತಿಳಿಸಿದ್ದಾರೆ. ವಾಹನವನ್ನು ಬಿಟ್ಟುಕೊಡಲು ಸುಳ್ಳು ಮಾಹಿತಿಯೊಂದಿಗೆ ಅರ್ಜಿ ಸಲ್ಲಿಸಿದ್ದೇನೆ ಎನ್ನುವುದು ಸರಿಯಲ್ಲ ಎಂದು ಹೇಳಿದ್ದಾರೆ. ಹಾಗೂ ತನಗೆ ಅಬಕಾರಿ ಅಪರಾಧದ ಕುರಿತು ಯಾವುದೇ ಮಾಹಿತಿ ಇರುವುದಿಲ್ಲವೆಂದು ಹೇಳಿದ್ದಾರೆ.

ಸದರಿ ಅಪರಾಧವು ತಮ್ಮ ತಿಳುವಳಿಕೆಗೆ ಬಾರದಂತೆ ನಡೆದಿದ್ದು, ಜಪ್ತಾದ ವಾಹನದಲ್ಲಿ ಮದ್ಯದ ಅಕ್ರಮ ಸಾಗಾಟ ನಡೆದಿರುವುದಿಲ್ಲ ತಾನು ನಿರ್ದೋಷಿ ಎಂದು ಸಿದ್ಧಪಡಿಸುವ ಜವಾಬ್ದಾರಿ ನೋಂದಾಯಿತ ವಾಹನ ಮಾಲಿಕರ ಮೇಲೆ ಇರುತ್ತದೆ. ಸದರಿಯವರ ಮೇಲಿನ ಹೇಳಿಕೆಯನ್ನು ಗಮನಿಸಿದಾಗ ಸದರಿಯವರು ತಾನು ನಿರ್ದೋಷಿ ಎಂದು ಸಿದ್ಧಪಡಿಸುವಲ್ಲಿ ವಿಫಲರಾಗಿರುತ್ತಾರೆ. ಆದ್ದರಿಂದ ಎರಡನೇ ಅಂಶವನ್ನು ನಕಾರಾತ್ಮಕವಾಗಿ ಪರಿಗಣಿಸಲಾಗಿದೆ.

ಈ ಮೇಲ್ಕಾಣಿಸಿದ ಕಾರಣದಿಂದ ಜಪ್ತಾದ ವಾಹನವನ್ನು ಸರ್ಕಾರಕ್ಕೆ ಮಟ್ಟುಗೋಲು ಹಾಕಿಕೊಳ್ಳುವುದು ಉಚಿತವೆಂದು ಕಂಡು ಬಂದದ್ದರಿಂದ ಈ ಕೆಳಗಿನಂತೆ ಆದೇಶ ಹೊರಡಿಸಲಾಗಿದೆ.

**ಆದೇಶ**

ಶ್ರೀ ಪಿ. ಎನ್. ಮುರಗೋಡ, ಅಧಿಕೃತ ಅಧಿಕಾರಿಗಳು ಹಾಗೂ ಡೆಪ್ಯೂಟಿ ಕಮೀಷನರ್ ಆಫ್ ಎಕ್ಸೈಜ್, ಬೆಳಗಾಂವ ಜಿಲ್ಲೆ, ಬೆಳಗಾಂವ ಆದ ನಾನು ಕರ್ನಾಟಕ ಅಬಕಾರಿ ಕಾಯಿದೆ 1965 ರ ಕಲಂ 43(ಎ) ರ ಅಡಿಯಲ್ಲಿ ದತ್ತವಾದ ಅಧಿಕಾರವನ್ನು ಚಲಾಯಿಸಿ ಅಬಕಾರಿ ಇನ್‌ಸ್ಪೆಕ್ಟರ್, ಇ.ಐ.ಬಿ, ಬೆಳಗಾಂವ ಇವರು ದಾಖಲು ಮಾಡಿದ ಗುನ್ನೆ ನಂ. 4/2002-03 ದಿನಾಂಕ: 8.10.2002 ನೇದ್ದರಲ್ಲಿ ಜಪ್ತಾದ ವಾಹನ ಅಶೋಕ ಲೈಲ್ಯಾಂಡ್ ಸಂ. ಕೆಎ-16-554ನ್ನು ಕರ್ನಾಟಕ ಸರ್ಕಾರಕ್ಕೆ ಮುಟ್ಟುಗೋಲು ಹಾಕಿಕೊಂಡಿರುತ್ತೇನೆ.

ಈ ಪ್ರಕರಣದಲ್ಲಿ ಜಪ್ತಾದ ಒಟ್ಟು 5366.520 ಲೀಟರ್ ಮದ್ಯವನ್ನು ಈಗಾಗಲೇ ಈ ಪ್ರಾಧಿಕಾರದ ಆದೇಶ ಸಂ. ಇಎಕ್ಸ್‌ಇ:ಸಿಆರ್‌ಎಂ:ಡಿಟಿಸಿಆರ್:575:2002-03 ದಿನಾಂಕ: 26.11.2002 ರಲ್ಲಿ ಸರ್ಕಾರಕ್ಕೆ ಮುಟ್ಟುಗೋಲು ಹಾಕಿಕೊಂಡು ಆದೇಶಿಸಿದ್ದೇನೆ ಹಾಗೂ ಸ್ಯಾಂಪಲ್‌ಗಾಗಿ ತೆಗೆದ ಒಟ್ಟು 4.950 ಲೀಟರ್ ಮದ್ಯವನ್ನು ಹೊರತುಪಡಿಸಿ ಉಳಿದ 5361.570 ಲೀಟರ್ ಮದ್ಯವನ್ನು ಕಾನೂನು ಬದ್ಧವಾಗಿ ವಿಲೇವಾರಿ ಮಾಡಲು ಅಬಕಾರಿ ಇನ್‌ಸ್ಪೆಕ್ಟರ್, ಉತ್ತರ ವಲಯ, ಬೆಳಗಾಂವ ಇವರಿಗೆ ಈಗಾಗಲೇ ಆದೇಶಿಸಿದ್ದೇನೆ.

ಈ ಆದೇಶವನ್ನು ಇಂದು ದಿನಾಂಕ: 12.02.2004 ರಂದು ಉಕ್ತಲೇಖನ ಕೊಟ್ಟು ಗಣಕಯಂತ್ರದಲ್ಲಿ ಮುದ್ರಣ ಮಾಡಿಸಿ ಪ್ರತಿಯನ್ನು ತಿದ್ದಿ ತೆರೆದ ನ್ಯಾಯಾಲಯದಲ್ಲಿ ಘೋಷಿಸಲಾಗಿದೆ.

**ಪಿ. ಎನ್. ಮುರಗೋಡ**

ಅಧಿಕೃತ ಅಧಿಕಾರಿಗಳು ಹಾಗೂ ಡೆಪ್ಯೂಟಿ ಕಮೀಷನರ್ ಆಫ್ ಎಕ್ಸೈಜ್, ಬೆಳಗಾಂವ ಜಿಲ್ಲೆ, ಬೆಳಗಾಂವ.

**ಅನುಬಂಧ-1**

**ಫಿರ್ಯಾದುದಾರರ ಪರ ಮಂಡಿಸಲಾದ ಸಾಕ್ಷಿಗಳ ವಿವರ:**

| | | | |
|---|---|---|---|
| ಪ್ರಾ.ಸಾ. 1 | - | ಶ್ರೀ ಬಿ. ಎ. ಹಡಲಗೆ, ಅಬಕಾರಿ ಇನ್ಸ್‌ಪೆಕ್ಟರ್, ಇಐಬಿ, ಬೆಳಗಾಂವ | - ಫಿರ್ಯಾದುದಾರರು |
| ಪ್ರಾ.ಸಾ. 2 | - | ಶ್ರೀ ಜಿ. ಬಿ. ಗುರವ, ಅಬಕಾರಿ ಸಬ್ ಇನ್ಸ್‌ಪೆಕ್ಟರ್, ಉತ್ತರ ಉಪ ವಲಯ ನಂ-1, ಬೆಳಗಾಂವ | - ತನಿಖಾಧಿಕಾರಿ |
| ಪ್ರಾ.ಸಾ. 3 | - | ಶ್ರೀ ಮಾಣಿಕ ವಾಸುದೇವ ಶೆಟ್ಟಿ, ಶೆಟ್ಟಿಗಲ್ಲಿ, ಬೆಳಗಾಂವ | - ಪಂಚ |

**ಅನುಬಂಧ-2**

**ಫಿರ್ಯಾದುದಾರರ ಪರ ಮಂಡಿಸಲಾದ ದಾಖಲೆಗಳು:**

| | | |
|---|---|---|
| ನಿಶಾನೆ ಪಿ-1 | - | ಪಂಚನಾಮೆಯ ಕಾರ್ಬನ್ ಪ್ರತಿ. |
| ನಿಶಾನೆ ಪಿ-1(ಎ) | - | ಅದರ ಮೇಲಿನ ಸಹಿ. |
| ನಿಶಾನೆ ಪಿ-1(ಬಿ) | - | ಪಂಚನಾಮೆಯ ಮೇಲಿನ ಪಂಚರ ಸಹಿ |
| ನಿಶಾನೆ ಪಿ-2 | - | ಫಿರ್ಯಾದಿ ಕಾರ್ಬನ್ ಪ್ರತಿ |
| ನಿಶಾನೆ ಪಿ-2(ಎ) | - | ಅದರ ಮೇಲಿನ ಸಹಿ. |
| ನಿಶಾನೆ ಪಿ-3 | - | ಕಲಂ 54ರ ಪ್ರಕಾರ ಸಕಾರಣ ಒದಗಿಸಿ ಬರೆದ ಪತ್ರ |
| ನಿಶಾನೆ ಪಿ-3(ಎ) | - | ಅದರ ಮೇಲಿನ ಸಹಿ. |
| ನಿಶಾನೆ ಪಿ-4 | - | ಪ್ರಥಮ ವರ್ತಮಾನ ಕಾರ್ಬನ್ ಪ್ರತಿ. |
| ನಿಶಾನೆ ಪಿ-4(ಎ) | - | ಅದರ ಮೇಲಿನ ಸಹಿ. |
| ನಿಶಾನೆ ಪಿ-5 | - | ಮುದ್ದೆಮಾಲನ್ನು ತಾಬಾದಲ್ಲಿ ಇಟ್ಟುಕೊಳ್ಳಲು ಪಡೆದ ಅನುಮತಿ ಪತ್ರ |

ನಿಶಾನೆ ಪಿ-5(ಎ) - ಅದರ ಮೇಲಿನ ಸಹಿ.
ನಿಶಾನೆ ಪಿ-6 - ರಾಸಾಯನಿಕ ಪರೀಕ್ಷೆ ವರದಿಯ ಝೆರಾಕ್ಸ್ ಪ್ರತಿ.
ನಿಶಾನೆ ಪಿ-6(ಎ) - ಅದರ ಮೇಲಿನ ತನಿಖಾಧಿಕಾರಿಗಳ ಸಹಿ
ನಿಶಾನೆ ಪಿ-7 - ಜಪ್ತಾದ ಮದ್ಯವನ್ನು ಮುಟ್ಟುಗೋಲು ಹಾಕಿಕೊಳ್ಳಲು ವಿನಂತಿಸಿ ಬರೆದ ಪತ್ರ
ನಿಶಾನೆ ಪಿ-7(ಎ) - ಅದರ ಮೇಲಿನ ಸಹಿ.
ನಿಶಾನೆ ಪಿ-8 - ಮದ್ಯವನ್ನು ಮುಟ್ಟುಗೋಲು ಹಾಕಿಕೊಂಡ ಆದೇಶ

**ಅನುಬಂಧ-3**

ವಾಹನ ಮಾಲಿಕರ ಪರವಾಗಿ ವಿಚಾರಣೆ ಮಾಡಲಾದ ಸಾಕ್ಷಿದಾರರು

ಡಿ.ಡಬ್ಲ್ಯೂ -1 - ಶ್ರೀ ಎಂ. ಸದಾಶಿವ ತಂದೆ ಮುನಿಬೆಟ್ಟಪ್ಪ, ಚಾಮರಾಜಪೇಟೆ, ಬೆಂಗಳೂರು - ವಾಹನ ಮಾಲಿಕರು

**ಪಿ. ಎನ್. ಮುರಗೋಡ**

ಪಿ.ಆರ್.428 ಅಧಿಕೃತ ಅಧಿಕಾರಿಗಳು ಹಾಗೂ ಡೆಪ್ಯೂಟಿ ಕಮೀಷನರ್ ಆಫ್ ಎಕ್ಸೈಜ್, ಬೆಳಗಾಂವ ಜಿಲ್ಲೆ, ಬೆಳಗಾಂವ.

**ಕಾರ್ಯನಿರ್ವಾಹಕ ಅಭಿಯಂತರರು, ಜಸಂಇ ಕಾ.ಯೋ.ನಿ. ವಿಭಾಗ ಸಂ. 3, ಭಾತಂಬ್ರಾ**

**ಅಧಿಸೂಚನೆ**

**(ನೀರಾವರಿ ಕಾಯ್ದೆ ಸೆಕ್ಷನ್-2(ಎಸ್)ಪ್ರಕಾರ)**

**ಸಂ:ಜಸಂಇ:ಕಾಯೋನಿ:ವಿ-3:ಸ.ಇಂ.2:ಚು.ನಾ.ಯೋ:ಅಧಿಸೂಚನೆ:03-04:2017(ಎ) ದಿನಾಂಕ: 16ನೇ ಫೆಬ್ರವರಿ 2004**

ಸರಕಾರಿ ಅಧಿಸೂಚನೆ ಸಂ. ಐ.ಡಿ-19-ಎನ್.ಪಿ.ಸಿ:2000(ಪಿ) ದಿನಾಂಕ: 19.2.2001ರ ಸರಕಾರದ ಅಧಿಸೂಚನೆಯಂತೆ ದತ್ತವಾದ ಅಧಿಕಾರವನ್ನು ಚಲಾಯಿಸಿ ಈ ಕೆಳಕಂಡ ಅಂಕಣ 3 ಹಾಗೂ 4 ರಲ್ಲಿ ತೋರಿಸಿರುವ ನೀರಾವರಿ ಕ್ಷೇತ್ರಕ್ಕೆ ನೀರು ಬಳಕೆದಾರರ ಸಂಘ ಸ್ಥಾಪಿಸಲು ಅಧಿಸೂಚನೆ ಹೊರಡಿಸಲಾಗಿದೆ.

ತಖ್ತೆ: ಯೋಜನೆಯ ಹೆಸರು: ಚುಳಕಿ ನಾಲಾ ಯೋಜನೆ.

| ಕ್ರ.ಸಂ. ನಿ.ಬ. ಸಂಘ | ವಿತರಣಾ ಕಾಲುವೆ, ಉಪವಿತರಣಾ ಕಾಲುವೆ, ಮೈನರ್ ಲ್ಯಾಟರಲ್ಸ್ ನೇರ ಪೈಪ್ ಔಟಲೆಟಗಳ ಹೆಸರು | ನೀರಾವರಿಯಾಗುವಂತಹ ಕ್ಷೇತ್ರ ಹಾಗೂ ಅದರ ಆಪರೇಷನ್ | |
|---|---|---|---|
| | | ಹಳ್ಳಿಯ ಹೆಸರು | ನೀರಾವರಿಯಾಗುವಂತಹ ಕ್ಷೇತ್ರ ಹೆಕ್ಟೇರ್‌ಗಳಲ್ಲಿ |
| 1 | 2 | 3 | 4 |
| | **ಬಲದಂಡೆ ಕಾಲುವೆ** | | |
| 1 | ವಿತರಣಾ ಕಾಲುವೆ 1, 2, 3, 4, 5, 6, 7, 8 ಮತ್ತು 9 | **ಮುಚಳಂಬ (ಕೇ.ಸ್ಥಾನ)** | 253.56 |
| | | ಗೋರ್ಟಾ ಬಿ. | 178.85 |
| | | ತೊಗಲೂರ | 8.76 |
| | | ಹೊನ್ನಳ್ಳಿ | 35.68 |
| | | **ಒಟ್ಟು** | **476.85** |
| 2 | ವಿತರಣಾ ಕಾಲುವೆ 10, 11, 12, 13, 14, 15, 16, 17, 18, 19, 20, 21 ಮತ್ತು 22 | **ಗೋರ್ಟಾ ಬಿ (ಕೇ.ಸ್ಥಾನ)** | 259.22 |
| | | ಹೊನ್ನಳ್ಳಿ | 156.33 |
| | | ಹಾಲಗೋರ್ಟಾ | 15.21 |
| | | ಮುರಂಬಿ | 54.78 |
| | | **ಒಟ್ಟು** | **485.54** |
| 3 | ವಿತರಣಾ ಕಾಲುವೆ 23, 24, 25, 26, 26(ಎ) ಮತ್ತು 27 | **ಮುರಂಬಿ (ಕೇ.ಸ್ಥಾನ)** | 316.14 |
| | | ಕುಟೆಗಾಂವ | 31.02 |
| | | ಉಚ್ಚಾ | 94.53 |
| | | ಬ್ಯಾಲಹಳ್ಳಿ | 54.72 |
| | | **ಒಟ್ಟು** | **496.41** |
| 4 | ವಿತರಣಾ ಕಾಲುವೆ 28, 29, 30, 31, 32 ಮತ್ತು 33 | ಉಚ್ಚಾ | 70.25 |
| | | ಮುರಂಬಿ | 4.65 |
| | | **ಕೊಟಗೇರಾ (ಕೇ ಸ್ಥಾನ)** | 271.48 |
| | | ಲಾಧಾ | 16.82 |
| | | **ಒಟ್ಟು** | **363.20** |

| 1 | 2 | 3 | 4 |
|---|---|---|---|
| | **ಎಡದಂಡೆ ಕಾಲುವೆ** | | |
| 5 | ವಿತರಣಾ ಕಾಲುವೆ 1, 2, 3, 4, 5, 6, 7, 8 ಮತ್ತು 9 | **ಮುಚಳಂಬ (ಕೇ.ಸ್ಥಾನ)**<br>ತೊಗಲೂರು | 290.55<br>186.21 |
| | | **ಒಟ್ಟು** | **476.76** |
| 6 | ವಿತರಣಾ ಕಾಲುವೆ 10, 11, 12, 13, 14 ಮತ್ತು 15 | ತೊಗಲೂರು<br>**ರಾ. ಗೌಡಗಾಂವ (ಕೇ.ಸ್ಥಾನ)** | 18.82<br>472.69 |
| | | **ಒಟ್ಟು** | **491.51** |
| 7 | ವಿತರಣಾ ಕಾಲುವೆ 16 ಮತ್ತು 17 | ಕುಟೆಗಾಂವ<br>**ಲಾಧಾ (ಕೇಂದ್ರ ಸ್ಥಾನ)** | 35.81<br>345.20 |
| | | **ಒಟ್ಟು** | **381.01** |
| 8 | ವಿತರಣಾ ಕಾಲುವೆ 18, 19 ಮತ್ತು 20 | ಲಾಧಾ<br>**ಗೋರಚಿಂಚೋಳಿ (ಕೇ.ಸ್ಥಾನ)** | 254.55<br>220.76 |
| | | **ಒಟ್ಟು** | **475.31** |
| 9 | ವಿತರಣಾ ಕಾಲುವೆ 21 ಮತ್ತು 22 | **ಇಂಚೂರ (ಕೇಂದ್ರ ಸ್ಥಾನ)**<br>ಹಲಸಿ | 290.36<br>110.58 |
| | | **ಒಟ್ಟು** | **400.94** |

ಕಾರ್ಯನಿರ್ವಾಹಕ ಅಭಿಯಂತರರು, ಜಸಂ೩

ಪಿ.ಆರ್. 429 ಕಾ.ಯೋ.ನಿ. ವಿಭಾಗ ಸಂ. 3, ಭಾತಂಬ್ರಾ

**7ನೇ ಎ.ಸಿ.ಎಂ.ಎಂ. ನ್ಯಾಯಾಲಯದ ಕಛೇರಿ, ಬೆಂಗಳೂರು ಮಹಾನಗರ, ನೃಪತುಂಗ ರಸ್ತೆ,**

**ಬೆಂಗಳೂರು ನಗರ ದಿನಾಂಕ: 16ನೇ ಮಾರ್ಚ್ 2004**

ಈ ಮೂಲಕ ಸಾರ್ವಜನಿಕರಲ್ಲಿ ತಿಳಿಯಪಡಿಸುವುದೇನೆಂದರೆ ಈ ಕೆಳಕಂಡ ಮಾಲು ರಾಜಾಜಿನಗರ ಪೊಲೀಸ್ ಠಾಣೆಯಲ್ಲಿ ಅಮಾನತ್ತು ಪಡಿಸಿದ ಬಸ್ಸ್ ನಂ. ಕೆಎ02-ಎ-88 ಆಗಿದ್ದು ವಾರಸುದಾರರು ಇರುವುದಿಲ್ಲ. ಸದರಿ ಮಾಲಿನ ವಾರಸುದಾರರು ಇದ್ದಲ್ಲಿ ಅವರು ತಮ್ಮ ವಾರಸುದಾರಿಕೆಯನ್ನು ಈ ವಿಷಯ ಪ್ರಕಟಗೊಂಡ 30 ದಿನಗಳ ಒಳಗಾಗಿ ನ್ಯಾಯಾಲಯದಲ್ಲಿ ರುಜುವಾತುಪಡಿಸಿ ತಮ್ಮ ಮಾಲನ್ನು ಪಡೆಯಬಹುದಾಗಿದೆ. ತಪ್ಪಿದಲ್ಲಿ ಈ ಮಾಲನ್ನು ಸರಕಾರಕ್ಕೆ ಮುಟ್ಟುಗೋಲು ಹಾಕಲಾಗುವುದು.

| ಕ್ರ.ಸಂ. | ಮೊ.ಸಂ ಮತ್ತು ಕಲಂ | ಪಿ.ಎಫ್.ನಂ. | ಅಮಾನತ್ತು ಪಡಿಸಿದ ಮಾಲಿನ ವಿವರ |
|---|---|---|---|
| 1 | 11/2002 ಕಲಂ 465, 471,420 ಐಪಿಸಿ | 07/2002 | ಬಸ್ಸ್ ನಂ. ಕೆಎ02-ಎ-88 |

**ಜಿ. ಎಂ. ಕುಂಬಾರ್**

ದಂಡಾಧಿಕಾರಿಗಳು, 7ನೇ ಎ.ಸಿ.ಎಂ.ಎಂ. ನ್ಯಾಯಾಲಯ, ಬೆಂಗಳೂರು ನಗರ.

**7ನೇ ಎ.ಸಿ.ಎಂ.ಎಂ ನ್ಯಾಯಾಲಯದ ಕಛೇರಿ, ಬೆಂಗಳೂರು ಮಹಾನಗರ, ನೃಪತುಂಗ ರಸ್ತೆ,**

**ಬೆಂಗಳೂರು ನಗರ ದಿನಾಂಕ: 17ನೇ ಮಾರ್ಚ್ 2004**

ಈ ಮೂಲಕ ಸಾರ್ವಜನಿಕರಲ್ಲಿ ತಿಳಿಯಪಡಿಸುವುದೇನೆಂದರೆ ಈ ಕೆಳಕಂಡ ವಾಹನಗಳನ್ನು ರಾಜಾಜಿನಗರ ಪೊಲೀಸ್ ಠಾಣೆಯಲ್ಲಿ ಅಮಾನತ್ತು ಪಡಿಸಿದ್ದು ಅವುಗಳ ವಾರಸುದಾರರು ಇರುವುದಿಲ್ಲ. ಸದರಿ ಮಾಲುಗಳ ವಾರಸುದಾರರು ಇದ್ದಲ್ಲಿ ಅವರು ತಮ್ಮ ವಾರಸುದಾರಿಕೆಯನ್ನು ಈ ವಿಷಯ ಪ್ರಕಟಗೊಂಡ 30 ದಿನಗಳ ಒಳಗಾಗಿ ನ್ಯಾಯಾಲಯದಲ್ಲಿ ರುಜುವಾತುಪಡಿಸಿ ತಮ್ಮ ಮಾಲನ್ನು ಪಡೆಯಬಹುದಾಗಿದೆ. ತಪ್ಪಿದಲ್ಲಿ ಈ ಮಾಲನ್ನು ಸರಕಾರಕ್ಕೆ ಮುಟ್ಟುಗೋಲು ಹಾಕಲಾಗುವುದು.

| ಕ್ರ.ಸಂ. | ಸೀಮಿಸ್ ನಂ. | ಪಿ.ಎಫ್.ನಂ. | ಸ್ವತ್ತುಗಳ ವಿವರ |
|---|---|---|---|
| 1. | CMISS. No. 245/98 | 37/98 | T.V.S. Champ Reg. No. CKD-3378 Chassis No. Not Known Enginge No. Not Known |
| 2. | CMISS. No.1167/03 | 95/03 | Bajaj Chetak Scooter Reg. No. JKS-432 Chassis No.Not Known Engine No. WO5E092902 |
| 3. | CMISS. No.1168/03 | 96/03 | Silver Plus Moped Reg. No. CRM-4240 Chassis No. A 65049 E-8 Engine No. 218694 E-8 |

| ಕ್ರ.ಸಂ. | ಸೀಮಿಸ್ ನಂ. | ಪಿ.ಎಫ್.ನಂ. | ಸ್ವತ್ತುಗಳ ವಿವರ |
|---|---|---|---|
| 4. | CMISS. No.1169/03 | 97/03 | TVS 50 XL Reg. No. KA-03-K-5230 Chassis No. A310F 814337 Engine No. Not known |
| 5. | CMISS. No.1170/03 | 98/03 | Vijai Scooter Reg. No. MYT-2858 Chassis No. APo21377 Engine No. Not Known. |
| 6. | CMISS. No.1173/03 | 100/03 | Hero Majestic Moped Reg. No. CNY-410 Chassis No. Not Known Engine No. Not known. |
| 7. | CMISS. No.1176/03 | 101/03 | Lambretta Scooter Reg. No. MEB-1262. Chassis No. 2501113111 Engine. Not Known |
| 8. | CMISS. No.1177/03 | 102/03 | Luna Moped Reg. No. KA-04-E-577 Chassis No. Not Known Engine No. Not known |
| 9. | CMISS. No.1178/03 | 103/03 | Vespa 150 Scooter Reg. No. MYO-6087 Chassis No. Not Known Engine No. V 46212 M 91950 |
| 10. | CMISS. No.1179/03 | 104/03 | Yezdi Motor Cycle. Reg. No. MEM-7560. Chassis No. GEo69320 Engine No. Not known. |
| 11. | CMISS. No.1180/03 | 105/03 | Bajaj Super Scooter Reg. No. CAJ-429 Chassis No. Not Known Engine No. 05-E 8208 163138 |
| 12. | CMISS. No.1183/03 | 107/03 | Yezdi Motor Cycle Reg. No. CAL-9061 Chassis No. 208190 Engine No. 15D 250 107421 |
| 13. | CMISS. No.1189/03 | 108/03 | Lambretta Scooter Reg. No. MYQ-6675 Chassis No. 05087 AD 115014 Engine No. Not Known |
| 14. | CMISS. No.1190/03 | 109/03 | Bajaj Chetak Scooter Reg. No. KA-04-J-6536 Chassis No. 06C 93 B 03486 Engine No. 06F 93B 02682 |
| 15. | CMISS. No.1191/03 | 110/03 | Hero Honda Motor Cycle Reg. No. Not Known. Chassis No. 99M 19C 09684 Engine No. 99M 17M 10177 |
| 16. | CMISS. No.1192/03 | 111/03 | Bajaj 150 Scooter Reg. No. MEX-2857 Chassis No. Not Known Engine No. 03C 307 100286 |
| 17. | CMISS. No.1193/03 | 112/03 | Priya Scooter Reg. No. MEQ-9489 Chassis No. Not Known Engine No. V46212 M 116240 |
| 18. | CMISS. No.1202/03 | 113/03 | Hero Puch Reg. No. KA-03-L-05 Chassis No. CB 297193 Engine No. EB 291666 |
| 19. | CMISS. No.1203/03 | 114/03 | Hero Puch Reg. No. KA-02-H-929 Chassis No. CA-68604 Engine No. EA68320 |
| 20. | CMISS. No.1204/03 | 115/03 | Hero Honda CD 100 Motor Cycle Reg. No. KA-05-J-6841 Chassis No. Not Known Engine No. H10E-641225 |
| 21. | CMISS. No.1206/03 | 117/03 | Bajaj Super Scooter Reg. No. CKQ-3780 Chassis No. Not Known Engine No. WO 5E 254145 |
| 22. | CMISS. No.1212/03 | 118/03 | TVS 50 Moped Reg. No. CAZ-1573 Chassis No. A 811 F 131948 Engine No. Not Known |
| 23. | CMISS. No.1213/03 | 119/03 | TVS 50 Moped Reg. No. CKE-6149 Chassis No. A 807 F 066514 Engine No. A 807 M 070111 |
| 24. | CMISS. No.1214/03 | 120/03 | Luna Moped Reg. No. CKE-9860 Chassis No. Not Known Engine No. 12008164 |
| 25. | CMISS. No.1215/03 | 121/03 | TVS Champ Moped Reg. No. KA-03-E-5509 Chassis No. D007 F 378306 Engine No. NEP 0002A |
| 26. | CMISS. No.1216/03 | 122/03 | TVS 50 Moped Reg No. CAT-2733 Chassis No. Not Known Engine No. Not known |
| 27. | CMISS. No.1217/03 | 123/03 | Suzuki Supra Power Up Motor Cycle Reg. No. ATC-5264 Chassis No. 15116026474 Engine No. Not Known. |
| 28. | CMISS. No.1218/03 | 124/03 | Kinetic Safari Motor Cycle Reg. No. KA-02-J-4865 Chassis No. 58002745 Engine No. 55002591 |

| ಕ್ರ.ಸಂ. | ಸೀಮಿಸ್ ನಂ. | ಪಿ.ಎಫ್.ನಂ. | ಸ್ವತ್ತುಗಳ ವಿವರ |
|---|---|---|---|
| 29. | CMISS. No.1219/03 | 125/03 | Bajaj Chetak Scooter Reg. No. CAI-211 Chassis No. Not Known Engine No. 06E 8207 237163 |
| 30. | CMISS. No.1220/03 | 126/03 | Hero Puch Motor Cycle Reg. No. KA-01-H-3985 Chassis No. CB 19080 Engine No. EA-24693 |
| 31. | CMISS. No.1221/03 | 127/03 | Hero Puch Reg. No. KA-04-L-8476 Chassis No. MD 39561 BR SC 355108 Engine No. EB 352395 |
| 32. | CMISS. No.1226/03 | 128/03 | Bajaj Scooter, Reg. No. MH-03-A-7810 Chassis No. 03C 701M 006020 Engine No. 03B 701 306372. |
| 33. | CMISS. No.1227/03 | 129/03 | Priya Scooter Reg. No. MER-9970 Chassis No. 03C 905 MSO 20184 Engine No. 03 7906 MO 40802 |
| 34. | CMISS. No.1231/03 | 131/03 | TVS Champ Reg. No. KA-01-Q-3726 Chassis No. L 802 F 840757 Engine No. L 802 M 8229425 |

**ಜಿ. ಎಂ. ಕುಂಬಾರ್**

ದಂಡಾಧಿಕಾರಿಗಳು, 7ನೇ ಎ.ಸಿ.ಎಂ.ಎಂ. ನ್ಯಾಯಾಲಯ, ಬೆಂಗಳೂರು ನಗರ.

**7ನೇ ಎ.ಸಿ.ಎಂ.ಎಂ. ನ್ಯಾಯಾಲಯದ ಕಛೇರಿ, ಬೆಂಗಳೂರು ಮಹಾನಗರ, ನೃಪತುಂಗ ರಸ್ತೆ,**

**ಬೆಂಗಳೂರು ನಗರ ದಿನಾಂಕ: 17ನೇ ಮಾರ್ಚ್ 2004**

ಈ ಮೂಲಕ ಸಾರ್ವಜನಿಕರಲ್ಲಿ ತಿಳಿಯಪಡಿಸುವುದೇನೆಂದರೆ ಈ ಕೆಳಕಂಡ ವಾಹನಗಳು ಮತ್ತು ಇತರೆ ಸ್ವತ್ತುಗಳು ರಾಜಾಜಿನಗರ ಪೊಲೀಸ್ ಠಾಣೆಯಲ್ಲಿ ಅಮಾನತ್ತು ಪಡಿಸಿದ್ದು ಅವುಗಳ ವಾರಸುದಾರರು ಇರುವುದಿಲ್ಲ. ಸದರಿ ಮಾಲುಗಳ ವಾರಸುದಾರರು ಇದ್ದಲ್ಲಿ ಅವರು ತಮ್ಮ ವಾರಸುದಾರಿಕೆಯನ್ನು ಈ ವಿಷಯ ಪ್ರಕಟಗೊಂಡ 30 ದಿನಗಳ ಒಳಗಾಗಿ ನ್ಯಾಯಾಲಯದಲ್ಲಿ ರುಜುವಾತುಪಡಿಸಿ ತಮ್ಮ ಮಾಲನ್ನು ಪಡೆಯಬಹುದಾಗಿದೆ. ತಪ್ಪಿದಲ್ಲಿ ಈ ಮಾಲನ್ನು ಸರಕಾರಕ್ಕೆ ಮುಟ್ಟುಗೋಲು ಹಾಕಲಾಗುವುದು.

| ಕ್ರ.ಸಂ. | ಮೊ.ಸಂ. ಮತ್ತು ಕಲಂ | ಪಿ.ಎಫ್.ನಂ. | ಸ್ವತ್ತುಗಳ ವಿವರ |
|---|---|---|---|
| 1. | CR. No. 279/89 U/S 379 IPC | 182/89 | T.V.S. 50 Regn. No. ATC-1935 Chassis No. and Engine No. Not known |
| 2. | CR. No. 279/89 U/S 379 IPC | 183/89 | T.V.S. 50 Reg. No. CAL-8290 Chassis No. and Engine No. Not Known. |
| 3. | CR. No. 201/91 U/S 379 IPC | 79/91 | One Richo Wrist Watch |
| 4. | CR. No. 43/92 U/S 457, 380 IPC | 19/92 | One HMT Wrist Watch |
| 5. | CR. No. 43/92 U/S 457, 380 IPC | 20/92 | 5 KG Bross Bolt Nuts |
| 6. | CR. No. 43/92 U/S 457, 380 IPC | 21/92 | One HMT Utham Wrist Watch |
| 7. | CR. No. 43/92 U/S 457, 380 IPC | 25/92 | 1. One HMT Mayur Wrist Watch<br>2. One HMT Janatha Wrist Watch<br>3. One Henry Sandose Wrist Watch |
| 8. | CR. No. 77/99 U/S 457, 380 IPC | 63/99 | One Lady Citizen Wrist Watch |
| 9. | CR. No. 77/99 U/S 457, 380 IPC | 64/99 | 1. One Omex Wrist Watch<br>2. One Bifora Lady Wrist Watch |
| 10. | CR. No. 13/00 U/S 379 IPC | 45/00 Item No.1 | Hero Ranger Span Cycle |
| 11. | CR. No. 13/00 U/S 379 IPC | 46/00 Item No. 2&3 | 1. One Hero Devil Cycle<br>2. One BSA Cycle |
| 12. | CR. No. 167/02 U/S 379 IPC | 78/02 | Hero Puch Regn. No. KA-05-S-2353 Chassis No. TC-415782 Engine No. EB-411376 |

**ಜಿ. ಎಂ. ಕುಂಬಾರ್**

ಪಿ.ಆರ್. 430 ದಂಡಾಧಿಕಾರಿಗಳು, 7ನೇ ಎ.ಸಿ.ಎಂ.ಎಂ. ನ್ಯಾಯಾಲಯ, ಬೆಂಗಳೂರು ನಗರ.

**ಕಂದಾಯ ಇಲಾಖೆ**

**ತಹಸೀಲ್ದಾರ್‌ರವರ ಕಾರ್ಯಾಲಯ, ದೊಡ್ಡಬಳ್ಳಾಪುರ ತಾಲ್ಲೂಕು, ದೊಡ್ಡಬಳ್ಳಾಪುರ**

**ನಮೂನೆ-27**

**"ಸಾರ್ವಜನಿಕ ಗಮನಕ್ಕೆ ಪ್ರಕಟಣೆ"**

**(ಕರ್ನಾಟಕ ಭೂ ಕಂದಾಯ ಅಧಿನಿಯಮ 1964 ಕಲಂ 68(1)ರ ಅಡಿಯಲ್ಲಿ)**

**ನಂ. ಎಸ್‌ಸಿ:ಆರ್‌ಸಿಆರ್:17:03-04 ದಿನಾಂಕ: 4ನೇ ಡಿಸೆಂಬರ್ 2003**

ಸರ್ಕಾರದ ಸ್ವತ್ತಾಗಿರುವ ಹಾಗೂ ಕೆಳಗಿನ ಅನುಸೂಚಿಯಲ್ಲಿ ನಿರ್ದಿಷ್ಟಪಡಿಸಿದ ಸಾರ್ವಜನಿಕ ನಕಾಶೆ ಕಂಡ ದಾರಿಯನ್ನು ಸಾರ್ವಜನಿಕ ಉಪಯೋಗಕ್ಕೆ ಅಗತ್ಯವಿಲ್ಲವೆಂದು ರಾಜ್ಯ ಸರ್ಕಾರಕ್ಕೆ ಕಂಡು ಬಂದಿರುವುದರಿಂದ ಈಗ ಕರ್ನಾಟಕ ಭೂ ಕಂದಾಯ ಅಧಿನಿಯಮ 1964ರ 68ನೇ ಪ್ರಕರಣದ (1)ನೇ ಉಪ ಪ್ರಕರಣದಿಂದ ಪ್ರದತ್ತವಾದ ಅಧಿಕಾರವನ್ನು ಚಲಾಯಿಸಿ, ಕರ್ನಾಟಕ ಸರ್ಕಾರವು ಸಾರ್ವಜನಿಕ ನಕಾಶೆ ದಾರಿಯ ಭಾಗವು ಸಾರ್ವಜನಿಕ ಉಪಯೋಗಕ್ಕೆ ಅಗತ್ಯವಿಲ್ಲವೆಂದು ಮತ್ತು ಸಾರ್ವಜನಿಕ ನಕಾಶೆ ದಾರಿಯ ಭಾಗದಲ್ಲಿ ಅಥವಾ ಅದರ ಮೇಲೆ ಸಾರ್ವಜನಿಕ ಹಾಗೂ ಎಲ್ಲಾ ವ್ಯಕ್ತಿಗಳ ಹಕ್ಕುಗಳು ಕೊನೆಗೊಳ್ಳತಕ್ಕದೆಂದು ಉದ್ದೇಶಿಸಿ, ಈ ಮೂಲಕ ಘೋಷಿಸುತ್ತದೆ.

ನಕಾಶೆಯ ದಾರಿಯ ಭಾಗದಲ್ಲಿ ಅಥವಾ ಅದರ ಮೇಲೆ ಹಿತಾಸಕ್ತಿಯುಳ್ಳ ಅಥವಾ ಹಕ್ಕುಳ್ಳ ಅಥವಾ ಈ ಉದ್ದೇಶದಿಂದ ಪ್ರತಿಕೂಲ ಪರಿಣಾಮಕ್ಕೊಳಗಾಗುವ ಸಂಭವವಿರುವ ಇತರೆ ಯಾವುದೇ ಹಿತಾಸಕ್ತಿ ಹೊಂದಿರುವ ಯಾವನೇ ಸಾರ್ವಜನಿಕನು ಅಥವಾ ಯಾವನೆ ವ್ಯಕ್ತಿಯು ಈ ದಿನಾಂಕದಿಂದ ಅಂದರೆ 4.12.2003 ರಿಂದ 4.3.2004 ರೊಳಗೆ (ತೊಂಭತ್ತು ದಿನದೊಳಗೆ) ಸದರಿ ಉದ್ದೇಶದ ಬಗ್ಗೆ ತನ್ನ ಆಕ್ಷೇಪಣೆಗಳನ್ನು ಅಂತಹ ಹಿತಾಸಕ್ತಿಯ ಅಥವಾ ಹಕ್ಕಿನ ಸ್ವರೂಪವನ್ನು ಮತ್ತು ಪ್ರತಿಕೂಲ ಪರಿಣಾಮವು ಸಂಭವಿಸಿರಬಹುದಾದ ರೀತಿಯನ್ನು ಮತ್ತು ಅಂಥ ಹಿತಾಸಕ್ತಿ ಅಥವಾ ಹಕ್ಕಿನ ಬಗ್ಗೆ ನಷ್ಟ ಪರಿಹಾರಕ್ಕಾಗಿ ಕ್ಲೇಮ್ ಮಾಡಲಾದ ಮೊಬಲಗು ಮತ್ತು ವಿವರಗಳನ್ನು ತಹಸೀಲ್ದಾರ್ ದೊಡ್ಡಬಳ್ಳಾಪುರ ತಾಲ್ಲೂಕು ಇವರಿಗೆ ಬರಹದಲ್ಲಿ ತಿಳಿಸತಕ್ಕದ್ದು.

**ಅನುಸೂಚಿ**

| | | |
|---|---|---|
| ತಾಲ್ಲೂಕು | : | ದೊಡ್ಡಬಳ್ಳಾಪುರ |
| ಗ್ರಾಮ | : | ಕನ್ನಮಂಗಲ |
| ಸ.ನಂ. | : | 18 ರಲ್ಲಿನ 0-02 ಗುಂಟೆ 20:2ರಲ್ಲಿ 0-04 ನಕಾಶೆ ದಾರಿ |
| ವಿಸ್ತೀರ್ಣ | : | 0-02 ಗುಂಟೆ ಮತ್ತು 0-04 ಗುಂಟೆ ಒಟ್ಟು 0-06 ಗುಂಟೆ |

**ಕೆ. ಎನ್. ನಾರಾಯಣಪ್ಪ**

ಪಿ.ಆರ್. 431 ತಹಸೀಲ್ದಾರ್ ದೊಡ್ಡಬಳ್ಳಾಪುರ ತಾಲ್ಲೂಕು, ದೊಡ್ಡಬಳ್ಳಾಪುರ.

**ತಹಶೀಲ್ದಾರ್, ದೊಡ್ಡಬಳ್ಳಾಪುರ ತಾಲ್ಲೂಕು, ದೊಡ್ಡಬಳ್ಳಾಪುರ.**

**ನಮೂನೆ-27**

**ಸಾರ್ವಜನಿಕ ಗಮನಕ್ಕೆ ಪ್ರಕಟಣೆ**

**(ಕರ್ನಾಟಕ ಭೂ ಕಂದಾಯ ಅಧಿನಿಯಮ 1964 ಕಲಂ 68ರ ಅಡಿಯಲ್ಲಿ)**

**ನಂ. ಎಲ್‌ಎನ್‌ಡಿ: ಸಿಆರ್:112:2001-02, ದಿನಾಂಕ: 5ನೇ ಡಿಸೆಂಬರ್ 2003**

ಸರ್ಕಾರದ ಸ್ವತ್ತಾಗಿರುವ ಹಾಗೂ ಕೆಳಗಿನ ಅನುಸೂಚಿಯಲ್ಲಿ ನಿರ್ದಿಷ್ಟಪಡಿಸಿದ ಸಾರ್ವಜನಿಕ ನಕಾಶೆ ಕಂಡ ದಾರಿಯನ್ನು ಸಾರ್ವಜನಿಕ ಉಪಯೋಗಕ್ಕೆ ಅಗತ್ಯವಿಲ್ಲವೆಂದು ರಾಜ್ಯ ಸರ್ಕಾರಕ್ಕೆ ಕಂಡು ಬಂದಿರುವುದರಿಂದ,

ಈಗ ಕರ್ನಾಟಕ ಭೂ ಕಂದಾಯ ಅಧಿನಿಯಮ 1964ರ 68ನೇ ಪ್ರಕರಣದ (1)ನೇ ಉಪ ಪ್ರಕರಣದಿಂದ ಪ್ರದತ್ತವಾದ ಅಧಿಕಾರವನ್ನು ಚಲಾಯಿಸಿ, ಕರ್ನಾಟಕ ಸರ್ಕಾರವು ಸಾರ್ವಜನಿಕ ನಕಾಶೆ ದಾರಿಯ ಭಾಗವು ಸಾರ್ವಜನಿಕ ಉಪಯೋಗಕ್ಕೆ ಅಗತ್ಯವಿಲ್ಲವೆಂದು ಮತ್ತು ಸಾರ್ವಜನಿಕ ನಕಾಶೆ ದಾರಿಯ ಭಾಗದಲ್ಲಿ ಅಥವಾ ಅದರ ಮೇಲೆ ಸಾರ್ವಜನಿಕ ಹಾಗೂ ಎಲ್ಲಾ ವ್ಯಕ್ತಿಗಳ ಹಕ್ಕುಗಳು ಕೊನೆಗೊಳ್ಳತಕ್ಕದೆಂದು ಉದ್ದೇಶಿಸಿ, ಈ ಮೂಲಕ ಘೋಷಿಸುತ್ತದೆ.

ನಕಾಶೆ ದಾರಿಯ ಭಾಗದಲ್ಲಿ ಅಥವಾ ಅದರ ಮೇಲೆ ಹಿತಾಸಕ್ತಿಯುಳ್ಳ ಅಥವಾ ಹಕ್ಕುಳ್ಳ ಅಥವಾ ಈ ಉದ್ದೇಶದಿಂದ ಪ್ರತಿಕೂಲ ಪರಿಣಾಮಕ್ಕೊಳಗಾಗುವ ಸಂಭವವಿರುವ ಇತರೆ ಯಾವುದೇ ಹಿತಾಸಕ್ತಿಯನ್ನು ಹೊಂದಿರುವ ಯಾವನೇ ಸಾರ್ವಜನಿಕನು ಅಥವಾ ಯಾವನೇ ವ್ಯಕ್ತಿಯು ಈ ದಿನಾಂಕದಿಂದ ಅಂದರೆ 5.12.2003 ರಿಂದ 5.3.2004 ರೊಳಗೆ (ತೊಂಭತ್ತು ದಿವಸಗಳೊಳಗೆ) ಸದರಿ ಉದ್ದೇಶದ ಬಗ್ಗೆ ತನ್ನ ಆಕ್ಷೇಪಣೆಗಳನ್ನು ಅಂತಹ ಹಿತಾಸಕ್ತಿಯ ಅಥವಾ ಹಕ್ಕಿನ ಸ್ವರೂಪವನ್ನು ಮತ್ತು ಪ್ರತಿಕೂಲ ಪರಿಣಾಮವು ಸಂಭವಿಸಿರಬಹುದಾದ ರೀತಿಯನ್ನು ಮತ್ತು ಅಂಥ ಹಿತಾಸಕ್ತಿ ಅಥವಾ ಹಕ್ಕಿನ ಬಗ್ಗೆ ನಷ್ಟ ಪರಿಹಾರಕ್ಕಾಗಿ ಕ್ಲೇಮ್ ಮಾಡಲಾದ ಮೊಬಲಗು ಮತ್ತು ವಿವರಗಳನ್ನು ತಹಶೀಲ್ದಾರ್, ದೊಡ್ಡಬಳ್ಳಾಪುರ ತಾಲ್ಲೂಕು ಇವರಿಗೆ ಬರಹದಲ್ಲಿ ತಿಳಿಸತಕ್ಕದ್ದು.

**ಅನುಸೂಚಿ**

| | | |
|---|---|---|
| ತಾಲ್ಲೂಕು | : | ದೊಡ್ಡಬಳ್ಳಾಪುರ |
| ಗ್ರಾಮ | : | ಕೆಸ್ತೂರು |
| ಸ.ನಂ. | : | 113 ರಲ್ಲಿನ ನಕಾಶೆ ಕಂಡ ಕಾಲುದಾರಿಯನ್ನು ಮಾತ್ರ |
| ವಿಸ್ತೀರ್ಣ | : | 0.05 ಗುಂಟೆ |

**ಕೆ. ಎನ್. ನಾರಾಯಣಪ್ಪ**

ಪಿ.ಆರ್. 432 ತಹಸೀಲ್ದಾರ್, ದೊಡ್ಡಬಳ್ಳಾಪುರ ತಾಲ್ಲೂಕು, ದೊಡ್ಡಬಳ್ಳಾಪುರ.